# ಸಿದ್ಧಗಂಗಾ



ದಿನಾಂಕ 9–3–81 ರಂದು ವ್ಯವಸಾಯ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ಮುಕ್ತಾಯ ಸಮಾರಂಭದಲ್ಲಿ ನಗರಾಭಿವೃದ್ಧಿ ಸಚಿವ ಧರ್ಮಸಿಂಗ್‌ರವರು ಸಭೆಯನ್ನುದ್ದೇಶಿಸಿ ಮಾತನಾಡುತ್ತಿರುವುದು. ಸಮಾರಂಭದಲ್ಲಿ ಪೂಜ್ಯ ಶ್ರೀ ಶ್ರೀಗಳವರು, ಮಾನ್ಯ ಜಿಲ್ಲಾಧಿಕಾರಿ ಆರ್ಯಮಿತ್ರರನ್ನೂ ಕಾಣಬಹುದು.

## FORM IV

Statement of Ownership and particulars of SIDDAGANGA Monthly.

| | |
|---|---|
| Place of Publication. | Sree Siddaganga Mutt |
| Periodicity of Publication | Monthly |
| Language in which it is Printed | Kannada |
| Printer's Name Nationality | Sree ShivakumaraSwamigalu<br>Indian |
| Address | Sree Siddaganga Mutt<br>Tumkur, Dist. (Karnataka) |
| Publisher's Name Nationality | H.B. Gangadharaiah<br>Indian |
| Address | Sree Siddaganga mutt<br>Tumkur, Dist. (Karnataka) |
| Editor's Name Nationality | Channappa Yareseeme<br>Indian |
| Address | Sree Siddaganga Mutt<br>Tumkur, Dist. (Karnataka) |
| Name and Address of individuals who own the Newspaper and partners or Share holders holding more than one percent of the total capital. | Sree Shivakumara Swamigalu<br>Sree Siddagangh mutt<br>Tumkur Dist. (Karnataka) |

I, H. B. Gangadharaiah, hereby declare that the particulars given above are true to the best of my knowledge and belief.

# ಸಿದ್ಧಗಂಗಾ

ಸಂಪುಟ–೧೭ ಸಂಚಿಕೆ - ೩ ಮಾರ್ಚ್, ೧೯೮೧

§ § §

ಭವಾಂಬೋಧಿನಾವಂ ಸದಾಶುದ್ಧಭಾವಂ
ಶಿವಂ ಶಾಂತಮೇಕಂ ಪರಿತ್ರಾತಲೋಕಂ।
ಶಿವಾನಂದಲಿಂಗಂ ಶಿವಾದ್ವೈತಲಿಂಗಂ
ಪರಬ್ರಹ್ಮ ಲಿಂಗಂ ಭಜೇಸಿದ್ಧಲಿಂಗಂ॥

§ § §

"ಧರೆಯಾಕಾಶವಿಲ್ಲದಂದು, ಮಂಡಲ ನೆಲೆಗೊಳ್ಳದಂದು
ಹೋಮನೇಮ ಜಪತಪವಿಲ್ಲದಂದು ನಿಮ್ಮನಾರು ಬಲ್ಲರು?
ಹರಿ ಬ್ರಹ್ಮರಿಗೆ ಅಗೋಚರ ನಿರ್ಲೇಪ ನಿರಂಜನನಾಗಿ
ವೇದಗಳು ನಿಮ್ಮನರಿಯವು, ಶಾಸ್ತ್ರಶೃತಿ ಸ್ಮೃತಿಗಳು
ನಿಮ್ಮನರಿಯವು.
ಗಗನ ಕುಸುಮ ಪರಿಮಳದಿಂದತ್ತಲು
ಗುಹೇಶ್ವರಾ, ನಿಮ್ಮ ನಿಲವನಾರು ಬಲ್ಲರು?

§ § §

ಆದಿಯಾಧಾರವಿಲ್ಲದಂದು, ಹಮ್ಮು ಬಿಮ್ಮುಗಳಿಲ್ಲದಂದು
ಸುರಾಳ ನಿರಾಳ ವಿಲ್ಲದಂದು, ಶೂನ್ಯ ನಿಶ್ಶೂನ್ಯವಿಲ್ಲದಂದು
ಚರಾಚರವೆಲ್ಲ ರಚನೆಗೆ ಬಾರದಂದು,
ಗುಹೇಶ್ವರಾ, ನೀನೊಬ್ಬನೇ ಇದ್ದಯಲ್ಲಾ ಇಲ್ಲದಂತೆ!

# ಈ ಸಂಚಿಕೆಯಲ್ಲಿ



## ಚಂದಾದಾರರಲ್ಲಿ ವಿನಂತಿ

1981 ನೆಯ ವರ್ಷದ ಚಂದಾ ನಂಬರ್ ಗುರುತಿಸಿಕೊಳ್ಳಿ. ವಿಳಾಸ ಬದಲಾವಣೆ ಮುಂತಾದ ವಿಚಾರಗಳಲ್ಲಿ ನಮ್ಮೊಡನೆ ವ್ಯವಹರಿಸುವಾಗ, ತಮ್ಮ ಚಂದಾ ನಂಬರ್ ಮತ್ತು ನಮ್ಮ ಪ್ರತಿನಿಧಿಗಳ ಹೆಸರನ್ನು ಬರೆಯುವುದನ್ನು ಮರೆಯಬೇಡಿ. ಚಂದಾ ಬಾಕಿ ಇರುವವರು ಸಂದಾಯಮಾಡಿ, ಸದಸ್ಯತ್ವವನ್ನು ಮುಂದುವರಿಸಿಕೊಂಡು 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿರಿ. ಸಿದ್ಧಗಂಗಾ ತರಿಸಿಕೊಳ್ಳುವಂತೆ ತಮ್ಮ ಬಂಧು ಮಿತ್ರರು ಮತ್ತು ಹಿತೈಷಿಗಳನ್ನು ಪ್ರೋತ್ಸಾಹಿಸಿ.





# ಶ್ರೀವಾಣಿ

ಬಾಹ್ಯ ವಸ್ತುಗಳನ್ನು ಭೋಗಿಸುವುದರಿಂದ ಬರುವ ತಾತ್ಕಾಲಿಕ ಸುಖವನ್ನೇ ಪರಮ ಸುಖವೆಂದು ನಂಬಿ ಇಂದು ಮಾನವನು ಭೋಗ ಲಾಲಸೆಯಲ್ಲಿ ಮಗ್ನನಾಗಿ ತನ್ನ ಬಾಳನ್ನು ಹಾಳು ಮಾಡಿಕೊಳ್ಳುತ್ತಿದ್ದಾನೆ. ಐಂದ್ರಿಯಿಕ ಸುಖದ ಕಲ್ಪನಾಸಾಮ್ರಾಜ್ಯದಲ್ಲಿ ವಿಹರಿಸುತ್ತಿದ್ದಾನೆ. ಇದು ಕ್ಷಣ ಭಂಗುರ, ಆಪಾತರಮಣೀಯ, ಪರಿಣಾಮ ವಿರಸವೆಂಬುದನ್ನು ಮರೆತು ಭ್ರಾಂತನಾಗಿ ಅನಂತ ದುಃಖಗಳನ್ನು ಅನುಭವಿಸುತ್ತಿದ್ದಾನೆ. ಆದರೆ ಇದೇ ಮಾನವನ ಪರಮ ಗುರಿಯಲ್ಲ. ಇದಕ್ಕಿಂತಲೂ ಮತ್ತೊಂದು ಸುಖವುಂಟು. ಅದನ್ನು ಪರಮ ಸುಖ ಅಥವಾ ಶಾಶ್ವತ ಸುಖವೆಂದು ಜ್ಞಾನಿಗಳು ಕರೆದಿದ್ದಾರೆ. ಆ ನಿಜ ಸುಖ ಪ್ರಾಪ್ತವಾಗಬೇಕಾದರೆ ಸಂಯಮಿತ ಜೀವನದಿಂದ ಕೂಡಿದ ಅಂತರಂಗ ಸಾಧನೆ ಆವಶ್ಯಕ. ಅದ್ದರಿಂದಲೇ ದೊಡ್ಡವರು ಸಾರಿದ್ದಾರೆ. "ಸಕಲೇಂದ್ರಿಯಗಳಲ್ಲಿ ವಿಹರಿಸುವ ಮನವಸೆಳೆದು ನಿಂದಾತನೇ ಸುಖಿ; ಪಂಚೇಂದ್ರಿಯಗಳಿಚ್ಛೆಯಲ್ಲಿ ಕೀಳು ಮನಗೊಂಡು ಸುಳಿವಾತನೇ ದುಃಖಿ; ಅಂತರ್ಮುಖವಾದರೆ ಅವಿರಳ ಜ್ಞಾನಿ" ಎಂದು. ತತ್ಪ್ರಯುಕ್ತ ಸಕಲ ಇಂದ್ರಿಯಗಳಲ್ಲಿ ಮನಸ್ವೀ ಸಂಚರಿಸುವ ಮನಸ್ಸನ್ನು ಹಿಡಿತದಲ್ಲಿಡಬೇಕು. ಮನವನ್ನು ಹಿಡಿತದಲ್ಲಿಟ್ಟವನೇ ಮಹಂತ. ಮನಸ್ಸಿನ ವರ್ತನೆ ಬಹಿರ್ಮುಖವಾಗಿ ಸಂಚರಿಸುವುದನ್ನು ತಡೆಹಿಡಿದು ಅಂತರಂಗದಲ್ಲಿ ಅಡಗಿರುವ ಸುಪ್ತ ಚೈತನ್ಯವನ್ನು ಅರಿಯುವುದರಲ್ಲಿ ಮಗ್ನಗೊಳಿಸಿದಾಗ ಮನದ ಮುಂದಣ ಮಾಯೆ ತೊಲಗಿ ಜ್ಞಾನ ಸ್ಫುರಿಸುತ್ತದೆ. ಆಗ ನಿಜೈಕ್ಯ ಜ್ಞಾನಿಯೆನಿಸುತ್ತಾನೆ. ಮಾಯಾ ಪ್ರಪಂಚ ತೊಲಗಿ ಮೋಕ್ಷ ಪ್ರಾಪ್ತಿಯಾಗುತ್ತದೆ. ಈ ವಿಧವಾದ ಜೀವಿತದ ಶಾಶ್ವತ ಮೋಕ್ಷ ಸುಖಪ್ರಾಪ್ತಿಯೇ ಮಾನವನ ಪರಮ ಗುರಿ.

**"ಸಿದ್ಧಗಂಗಾ" ಮಾಸ ಪತ್ರಿಕೆ**

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

**ಸಂಪಾದಕ ಮಂಡಲಿ**

ಪಂ॥ ಚನ್ನಪ್ಪ ಎರೇಸೀಮೆ
ಪಿ. ಎಸ್. ಚಂದ್ರಶೇಖರಯ್ಯ
ಬಸವರಾಜು

ಜಾಹಿರಾತು ಕಾರ್ಯದರ್ಶಿ
ಎಂ. ರೇಣುಕಾರಾಧ್ಯ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

**ಚಂದಾ ವಿವರ**

ಆಜೀವ ಸದಸ್ಯತ್ವ 151-00 ರೂ
ವಾರ್ಷಿಕ ಚಂದಾ 12- ರೂ

ಪ್ರಕಾಶಕರು
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ—572104
ತುಮುಕೂರು ಜಿಲ್ಲೆ.

**ಲೇಖಕರಲ್ಲಿ ಮನವಿ**

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ, ವೈಚಾರಿಕ, ಚಿಂತನ ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಅಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರೆಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮುಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.



# ಸಂಪಾದಕೀಯ

ಭಾರತದ ದಶವಾರ್ಷಿಕ ಜನಗಣತಿ ಮೊನ್ನೆತಾನೆ ಮುಗಿದಿದೆ. ಸ್ಥೂಲವಾಗಿ ತಿಳಿದುಬಂದಿರುವ ಈ ತಲೆಎಣಿಕೆ ಫಲಿತಾಂಶ ನಿರೀಕ್ಷಿಸಿದ ಮಟ್ಟಕ್ಕೂ ಮೀರಿದೆ ಎಂಬುದು ತಜ್ಞರ ಅಭಿಪ್ರಾಯ. ಶೀಘ್ರ ಅಂದಾಜಿನ ಪ್ರಕಾರ ಭಾರತದ ಜನಸಂಖ್ಯೆ ಈಗ 68.38 ಕೋಟಿ ಆಗಿದೆ. ವಸ್ತುತಃ ನಮ್ಮ ಜನಸಂಖ್ಯೆ ಈ ಎಣಿಕೆಗಿಂತಲೂ ಅಧಿಕವಾಗಿರುವುದು ಸಂಭವನೀಯ. ಕಾರಣ ಸುಮಾರು ಶೇ. 1.7 ರಷ್ಟು ಜನರ ಎಣಿಕೆ ಬಿಟ್ಟುಹೋಗಿದೆ ಎಂಬ ಅಭಿಪ್ರಾಯವಿದೆ. ಈ ಬಿಟ್ಟುಹೋಗಿರುವ ಜನಸಂಖ್ಯೆಯನ್ನು ಸೇರಿಸಿದರೆ 69 ಕೋಟಿಯ ಗಡಿ ತಲುಪುತ್ತದೆ. ಈ ಗಡಿಯನ್ನು ತಲುಪಲು ಸಾಮಾನ್ಯವಾಗಿ ಎಲ್ಲ ರಾಜ್ಯಗಳ ಕಾಣಿಕೆ ಸಂದಿದೆ. ಅಭಿವೃದ್ಧಿ ಹೊಂದುತ್ತಿರುವ ನಮ್ಮ ದೇಶಕ್ಕೆ ಈ ಜನಸಂಖ್ಯಾ ಸ್ಫೋಟ ಒಂದು ಪೆಡಂಭೂತ. ಈ ಕೂಸಿಗೆ ಜನ್ಮಕೊಟ್ಟವರು ನಾವೇ. ಎಚ್ಚರ ತಪ್ಪಿದರೆ ಈ ಭೂತ ನಮ್ಮನ್ನೇ ನುಂಗುತ್ತದೆ. ಕಳೆದ ಹತ್ತು ವರ್ಷಗಳಲ್ಲಿ ಆಗಿರುವ ಜನಸಂಖ್ಯೆಯ 13.56 ಕೋಟಿಯ ಏರಿಕೆಯ ಪರಿಣಾಮವನ್ನು ಊಹಿಸಿದರೆ ಈ ಶತಮಾನದ ತಿರುವಿನ ವೇಳೆಗೆ ನಮ್ಮ ಜನಸಂಖ್ಯೆ ಸುಮಾರು 100 ಕೋಟಿಯನ್ನು ಮೀರಿಸುತ್ತದೆ ಎಂಬುದರಲ್ಲಿ ನಿರ್ವಿವಾದವೆಂದು ಬಲ್ಲವರ ಅಭಿಪ್ರಾಯ. ನಮ್ಮ ದೇಶದಲ್ಲಿ ಈಗಿರುವ ಸಮಸ್ಯೆಗಳಿಗೆ ಇನ್ನು ಅಧಿಕ ಚೈತನ್ಯ ಮೂಡಿಬರುತ್ತದೆ. ಅನ್ನ, ವಸತಿ, ಉದ್ಯೋಗ ಇದರ ಜೊತೆ ನೆಮ್ಮದಿ ಮತ್ತು ಪ್ರಾಮಾಣಿಕ ಜೀವನದ ಬಗ್ಗೆ ಭವಿಷ್ಯದ ಪರಿಣಾಮನ್ನು ಊಹಿಸಿದರೆ ಪರಿಸ್ಥಿತಿಯ ಉಗ್ರ ಸ್ವರೂಪದ ಸೂಚನೆ ಕಂಡುಬರುತ್ತದೆ. ಈ ಉಗ್ರ ಸ್ವರೂಪದ ತಡೆಗೆ ಸರಕಾರ ಕೋಟಿಗಟ್ಟಲೆ ಹಣ ವ್ಯಯ ಮಾಡಿದೆ. ಹಲವಾರು ಯೋಜನೆಗಳು ಕಾರ್ಯನಿರತವಾಗಿವೆ. ಆದರೆ ಪರಿಣಾಮ ತೃಪ್ತಿಕರವಾಗಿಲ್ಲ. ಸರಕಾರ, ಅಧಿಕಾರಿಗಳು ಮತ್ತು ಮಹಾಜನಗಳು ನಮ್ಮ ದೇಶದ ಮುಂದಿನ ಕರಾಳ ಭವಿಷ್ಯವನ್ನು ಚಿಂತಿಸಿ ಜನಸಂಖ್ಯಾ ಸ್ಫೋಟದ ಕಡೆ ಗಮನ ಹರಿಸಿದಾಗ ಪರಿಸ್ಥಿತಿ ಸುಧಾರಿಸುವುದರಲ್ಲಿ ವಿಶ್ವಾಸಪಡಬಹುದಾಗಿದೆ.

# ನವನೀತ

ಅನಾರೋಗ್ಯಮನಾಯುಷ್ಯಮಸ್ವರ್ಗ್ಯಂ ಚಾತಿ ಭೋಜನಮ್ ।
ಅಪುಣ್ಯಂ ಲೋಕವಿದ್ವಿಷ್ಟಂ ತಸ್ಮಾತ್ತತ್ ಪರಿವರ್ಜಯೇತ್ ॥

—ಮನುಸ್ಮೃತಿ

ಹೆಚ್ಚು ತಿನ್ನುವುದು ರೋಗವನ್ನುಂಟುಮಾಡುತ್ತದೆ. ಆಯುಸ್ಸನ್ನು ಕಡಿಮೆ ಮಾಡುತ್ತದೆ. ಸುಖವಿಲ್ಲ. ಅದು ಪಾಪಕರ. ಜನರೂ ತಿಂಡಿಪೋತನೆಂದು ಬೈಯುತ್ತಾರೆ. ಆದುದರಿಂದ ಅತಿ ಭೋಜನ ಮಾಡಬಾರದು.

‡ ‡ ‡

..ತಮಾತ್ರಂ ನಯಃ ಶತ್ರುಂ ವ್ಯಾಧಿಂ ಚ ಪ್ರಶಮಂ ನಯೇತ್ ।
ಮಹಾಬಲೋಽಪಿ ತೇನೈವ ವೃದ್ಧಿಂ ಪ್ರಾಪ್ಯ ಸ ಹನ್ಯತೇ ॥

—ಪಂಚತಂತ್ರ

ಯಾರು ಶತ್ರುವನ್ನು ರೋಗವನ್ನು ಹುಟ್ಟಿದ ಕೂಡಲೇ ನಾಶಗೊಳಿಸುವುದಿಲ್ಲವೋ ಅಂಥವನು ಎಷ್ಟೇ ಬಲಶಾಲಿಯಾಗಿದ್ದರೂ ವೃದ್ಧಿಹೊಂದಿದ ಶತ್ರು ಅಥವಾ ರೋಗದಿಂದಲೇ ಕೊಲ್ಲಲ್ಪಡುತ್ತಾನೆ.

‡ ‡ ‡

ಉಪಾರ್ಜಿತಾನಾಮರ್ಥಾನಾಂ ತ್ಯಾಗ ಏವಹಿ ರಕ್ಷಣಂ ।
ತಡಾಗೋದರ ಸಂಸ್ಥಾನಾಂ ಪರೀವಾಹ ಇವಾಂಭಸಾಮ್ ॥

—ಸುಭಾಷಿತ

ಸಂಪಾದಿಸಿದ ಹಣಕ್ಕೆ ತ್ಯಾಗಮಾಡುವುದೇ ಅದರ ರಕ್ಷಣೆಗೆ ಸಾಧನವಷ್ಟೆ. ಕೆರೆಯೊಳಗೆ ಸೇರಿದ ನೀರಿಗೆ ಕೋಡಿಯು ಹೇಗೋ ಹಾಗೆ.



# ಚಿಂತನ

## "ನಿರಹಂಕಾರ"

"ಆಕಾಶವಾಣಿ ಕೃಪೆಯಿಂದ" — ಟಿ. ಆರ್. ಮಹಾದೇವಯ್ಯ.

ನಿರಹಂಕಾರ ಮನುಷ್ಯನಿಗೆ ಭೂಷಣ 'ಎನಗಿಂತ ಕಿರಿಯರಿಲ್ಲ' ಎಂದುಕೊಳ್ಳುವುದು, 'ಸದುವಿನಯವೇ ಸದಾಶಿವನ ಒಲುಮೆ' ಎಂದು ಭಾವಿಸುವುದು ಹಿರಿಯ ಗುಣ. ತಾನುಂಟೋ, ಮೂರುಲೋಕವುಂಟೋ ಎಂದು ಬೀಗಿದವರು ಏನಾದರು ? ಮಣ್ಣಿನಲ್ಲಿ ಮಣ್ಣಾದರು. ಭಗವತ್ ಶಕ್ತಿಯ ಎದುರು ನಾನೊಂದು ಕಪ್ಪಡದ ಹಾಗೆ, ಮಣ್ಣಬೊಂಬೆ, ಅವನ ಅನುಗ್ರಹವಿಲ್ಲದಿದ್ದರೆ ನಾನೊಂದು ಕಃಪದಾರ್ಥ ಎಂದು ವಿನಯದಿಂದ ಬಾಗಿ ನಡೆದವರು ಏನಾದರು ? ಪ್ರಾತಃಸ್ಮರಣೀಯರಾದರು. ಇದೆಲ್ಲವನ್ನು ಮಾನವ ಇತಿಹಾಸ ಸಾದರಪಡಿಸುತ್ತದೆ.

ಭಗವಂತನ ಕೃಪಾಶಕ್ತಿ ಜಗದುಪಕಾರಿಯಾಗಿ ಕೆಲಸಮಾಡಿದರೂ, ಮನೆಯ ರಜವನ್ನೆಲ್ಲಾ ಉಡುಗಿ ಮೂಲೆಯಲ್ಲಿ ಮೂಕವಾಗಿ ನಿಲ್ಲುವ ಕಸಪೊರಕೆಯಂತೆ ವಿನಯದ ಪ್ರತೀಕವಾಗಿರುತ್ತದೆ ಅದು ಎಂದೂ ತಾನು ಇಂಥ ಅದ್ಭುತವನ್ನು ಸಾಧಿಸಿದೆನೆಂದು ಹೇಳಿಕೊಳ್ಳುವುದಿಲ್ಲ. ಆ ಗುಣವೇ ದೈವೀಗುಣ. ಅದೇ ಮಾನವನಿಗೆ ಭೂಷಣ ಎಂದದ್ದು.

ನಮ್ಮ ಕನ್ನಡಕವಿಗಳಲ್ಲಿ ಇಂಥ ವಿನಯವಂತಿಕೆ ಅಪಾರ. ಅವರಲ್ಲಿ ಕೆಲವರಿಗೆ ಸಜ್ಜನಿಕೆ ಎಷ್ಟಿದೆಯೆಂದರೆ ತಮ್ಮ ಕಾವ್ಯದಲ್ಲಿ ಎಲ್ಲೂ ತಮ್ಮ ಹೆಸರನ್ನೇ ಹೇಳಿಕೊಳ್ಳುವುದಿಲ್ಲ. ಮಹಾಕಾವ್ಯವೊಂದನ್ನು ರಚಿಸಿದ ಕವಿ ತನ್ನ ವಯ್ಯಕ್ತಿಕ ವಿಷಯಗಳೇನನ್ನೂ ಹೇಳಿಕೊಳ್ಳದೆ ಕವಿಚರಿತೆಕಾರರಿಗೆ ಕವಿ, ಕಾಲ, ದೇಶಾದಿಗಳ ವಿಷಯದಲ್ಲಿ ಸಮಸ್ಯೆಯೊಡ್ಡಿರುವ ನಿದರ್ಶನಗಳನೇಕ. ಮತ್ತೆ ಕೆಲವರು ನಾನು ನೆಪಮಾತ್ರ, ಎಲ್ಲವನ್ನೂ ದೇವರೇ ಆಗುಮಾಡಿದ ಎಂದು ನಮ್ರರಾಗಿ ನುಡಿದಿದ್ದಾರೆ. ಕನ್ನಡ ಜನತೆಗೆ ಅಮೂಲ್ಯ ಕಾವ್ಯ ಗದುಗಿನ ಭಾರತವನ್ನು ನೀಡಿದ ಕುಮಾರವ್ಯಾಸ 'ಕವಿ ಗದುಗಿನ ವೀರನಾರಾಯಣ' ಲಿಪಿಕಾರ ಕುಮಾರವ್ಯಾಸ ಎಂದಿದ್ದರೆ, ಚಾಮರಸ ತನ್ನ ಪ್ರಭುಲಿಂಗಲೀಲೆಯಲ್ಲಿ 'ತನ್ನೊಳಗೆ ನೆಲಸಿರುವ ಭಗವಂತನು ನುಡಿಸಿದಂತೆ, ನಾನು ನುಡಿದಿದ್ದೇನೆ, ಅಷ್ಟೆ' ಎಂದು ಸೌಜನ್ಯದಿಂದ ನುಡಿದಿದ್ದಾನೆ. ಮತ್ತೊಂದು ಜನಪ್ರಿಯ ಕೃತಿ ಜೈಮಿನಿ ಭಾರತವನ್ನು ನೀಡಿದ ಲಕ್ಷ್ಮೀಶನಂತೂ "ನಾನೊಂದು ವೀಣೆ ದೇವರು ವೈಣಿಕ. ಆತನೇ ನನ್ನಿಂದ ಈ ಕೃತಿಯನ್ನು ಹೊಮ್ಮಿಸಿದ್ದಾನೆ ಎಂದು ನಿರಹಂಕಾರದಿಂದ ನುಡಿದಿದ್ದಾನೆ.

ಶರಣವರೇಣ್ಯ ಬಸವಣ್ಣನವರನ್ನು ದೇವರು ಪ್ರಶ್ನಿಸಿದನರತೆ' ಬಸವ ಬಾರೈ, ಮರ್ತ್ಯಲೋಕದೊಳಗೆ ಭಕ್ತರುಂಟೇ ಹೇಳಯ್ಯ. ಎಂದು ಅದಕ್ಕೆ ಬಸವಣ್ಣನವರು

(ಮೂರನೇ ರಕ್ಷಾಪುಟ ನೋಡಿ)

## ಕ್ಷೇತ್ರವಾರ್ತೆ 'ಎಲೆ ಕಾಯಕ'

—ಪಿ. ಎನ್. ಚಂದ್ರಶೇಖರಯ್ಯ

ಈ ಶತಮಾನದ ಆದಿಯಿಂದಲೂ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಜಾತ್ರೆಯು ಪ್ರತಿಶಿವರಾತ್ರಿಯ ಕಾಲದಲ್ಲಿ ನಡೆದುಬರುತ್ತಿರುವುದು ಸರ್ವವಿದಿತವಷ್ಟೆ. ಪೂಜ್ಯ ಶ್ರೀ ಶ್ರೀ ಉದ್ದಾನ ಶಿವಯೋಗೀಶ್ವರ ರಿಂದ ಸಣ್ಣಪ್ರಮಾಣದಲ್ಲಿ ಆರಂಭಗೊಂಡ ಜಾತ್ರಾ ದಾಸೋಹಾದಿ ಕಾರ್ಯಗಳು ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಕರ್ತೃತ್ವ ಶಕ್ತಿಯಿಂದ ದಿನೇ ದಿನೇ ಬೆಳೆಯತೊಡಗಿದೆ. ಸ್ವಾಮಿಜಾತ್ರೆಗೆ ಬರುವ ಲಕ್ಷಾಂತರ ಜನರಿಗೆ ನಡೆಯುವ ದಾಸೋಹ ಕಾರ್ಯ ಜಾತ್ರೆಯಷ್ಟೆಯೇ ಪ್ರಾಚೀನವಾದುದು. ಈ ಬೃಹತ್ ಪ್ರಮಾಣದಲ್ಲಿ ನಡೆಯುವ ದಾಸೋಹ ಕಾರ್ಯಕ್ಕೆ ನಾಡಿನ ಅನೇಕ ಜನ ಭಕ್ತರ ಉದಾರ ಸಹಾಯ ಪೂರ್ಣ ಸಹಕಾರಿಯಾಗಿದೆ. ಬರುವ ಭಕ್ತರು ತಮ್ಮ ತಲೆಯಮೇಲೆ ಅರಿಕೆ ಸಲ್ಲಿಸಿದ್ದ ದವಸ ಧಾನ್ಯ ಊಟದ ಎಲೆ ಮುಂತಾದುವುಗಳನ್ನು ಹೊತ್ತುತರುತ್ತಾರೆ. ಜಾತ್ರಾಕಾಲದಲ್ಲಿ ಅನೇಕಮಂದಿ ಭಕ್ತರು ತಮ್ಮ ತನು ಮನ ಧನಗಳನ್ನು ಅರ್ಪಿಸುವುದರ ಮೂಲಕ ಸೇವೆಯನ್ನು ಸಲ್ಲಿಸುತ್ತಾರೆ, ಇಂತಹ ಪುಣ್ಯಾತ್ಮರಲ್ಲಿ ಕ್ಯಾತಸಂದ್ರದ ಅಗ್ನಿವಂಶ ಕ್ಷತ್ರಿಯರಾದ ಶ್ರೀ ನಾಗಪ್ಪ ಮತ್ತು ಶ್ರೀಮತಿ ಸಿದ್ದಮ್ಮನವರ ಮಕ್ಕಳು ಶ್ರೀ ಕೆ. ಎನ್. ಸುಬ್ಬಯ್ಯನವರೂ ಒಬ್ಬರು. ಇವರದು ಜಾತ್ರಾ ಕಾಲದಲ್ಲಿ ದಾಸೋಹಕ್ಕೆ ಬೇಕಾದ ಊಟದ ಎಲೆಯನ್ನು ತಮ್ಮ ಕೈಲಾದಷ್ಟು ಒದಗಿಸಿ ಕೊಡುವ ಕಾಯಕ ಅವರದು. ಶ್ರೀಯುತರು ಸು 45 ವರ್ಷಗಳಿಂದಲೂ ನಿರಂತರವಾಗಿ ಈ ಕಾಯಕವನ್ನು ಮಾಡಿಕೊಂಡು ಬಂದಿದ್ದಾರೆ ನನಗೆ ಈ ರೀತಿ ಧರ್ಮಕಾರ್ಯಕ್ಕೆ ಪ್ರೇರಣೆ ದೊರೆತದ್ದು ಶ್ರೀ ಉದ್ದಾನ ಶಿವಯೋಗಿಗಳವರ ಆಶೀರ್ವಾದಬಲವೇ ಕಾರಣ ಎಂದು ಅವರು ಹೇಳುತ್ತಾರೆ. ಪ್ರತಿ ವರ್ಷ ಜನವರಿ 14 ರ ಪುಣ್ಯ ಸಂಕ್ರಮಣದಂದು ಪ್ರಾರಂಭಿಸುತ್ತಾರೆ. ಅಂದಿನಿಂದ ಶಿವರಾತ್ರಿಯವರೆಗೆ ಅಡಿಕೆ ಪಟ್ಟೆಯನ್ನು ಹಣಕ್ಕೆ ಕೊಂಡು ಸಂಗ್ರಹಿಸಿ ಮಾರನೆ ದಿವಸ ಶ್ರೀ ಸಿದ್ಧಲಿಂಗೇಶ್ವರರ ಮಡಿತೇರಿನಂದು ಸುಮಾರು ಒಂದು ಲಕ್ಷದವರೆಗೆ ಊಟದ ಎಲೆಯನ್ನು ಶ್ರೀ ಮಠಕ್ಕೆತರುತ್ತಾರೆ. ಅಂದು ಬೆಳಗ್ಗೆ ಅಲಂಕರಿಸಿದ ಎತ್ತಿನ ಗಾಡಿಗಳಲ್ಲಿ ಪ್ರತಿವರ್ಷವೂ ತರುವ ದೃಶ್ಯ ಭಾವೋತ್ಕರ್ಷವನ್ನುಂಟುಮಾಡುತ್ತದೆ. ದಾನಿಗಳನ್ನು ಪ್ರಚೋದಿಸುತ್ತದೆ. ವ್ಯಕ್ತಿಯ ಬಾಳು ಧನ್ಯವೆಂಬ ಸ್ಮರಣೆಯನ್ನು ತರುತ್ತದೆ. ಧರ್ಮ ಕೆಲಸಕ್ಕೆ ನನ್ನ ಸೇವೆ ಮೀಸಲು ಎಂದ ಶ್ರೀ ಸುಬ್ಬಯ್ಯನವರು ಜಾತ್ರೆಯಲ್ಲಿ ರಥೋತ್ಸವದಂದು ಹೆಸರು ಬೇಳೆ ಬೇಲದ ಹಣ್ಣಿನ ಪಾನಕವನ್ನು ಏರ್ಪಡಿಸಿರುತ್ತೇವೆ ಮತ್ತು ಶ್ರೀ ಕ್ಷೇತ್ರಕ್ಕೆ ಬರುವಾಗ ರೈಲ್ವೇ ನಿಲ್ದಾಣದ ಸಮೀಪದ ಆಲದಮರದಡಿ ಬರುವ ಯಾತ್ರಿಕರಿಗೆ ಅರವಂಟಿಗೆಯನ್ನು ಏರ್ಪಡಿಸುತ್ತೇವೆ ಎಂದು ಹೇಳುತ್ತಾರೆ. ಶ್ರೀ ಸುಬ್ಬಯ್ಯನವರ ಕುಟುಂಬಕ್ಕೆ ಶ್ರೀ ಸಿದ್ಧಲಿಂಗೇಶ್ವರರು ಮಂಗಳವನ್ನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.





# ಮರ್ತ್ಯಲೋಕದ ಮಹಾಬೆಳಗು ಉದ್ದಾನಯತೀಶ

—ಚನ್ನಪ್ಪ ಎರೇಸೀಮೆ

### ಸಿದ್ಧಗಂಗಾ ಮಠವೊಂದು ದೊಡ್ಡನ್ಯಾಯಸ್ಥಾನ :

ಉದ್ದಾನೇಶ್ವರರು ನಿಷ್ಠುರವಾದಿಗಳು : ಸುಳ್ಳಿನಿಂದ ಸತ್ಯವನ್ನು ಮುಚ್ಚುವ ಜನರಿಗೆ ತಕ್ಕ ಬುದ್ಧಿಗಲಿಸುವುದು ಇವರ ಲೋಕ ನಡವಳಿಕೆಯನ್ನು ತಿದ್ದುವ ಮಹಾ ಗುಟ್ಟಾಗಿತ್ತು. ಸುತ್ತ ಹತ್ತು ಹಂದಾರಿಯ ಗ್ರಾಮಾಂತರ ಪ್ರದೇಶಗಳ ದೊಡ್ಡ ದೊಡ್ಡ ವ್ಯಾಜ್ಯಗಳು ಸಿದ್ಧಗಂಗಾ ಮಠಕ್ಕೆ ಬರಬೇಕು. ಇಲ್ಲಿ ಮುರಿಯ ಬೇಕು. ಉದ್ದಾನ ಶಿವಯೋಗಿಗಳು ಹೇಳಿದ ತೀರ್ಮಾನಕ್ಕೆ ಯಾರೂ ತುಟಿ ಪಿಟಕ್ ಎನ್ನುವಂತಿಲ್ಲ. ಕೋರ್ಟು ಕಛೇರಿಗಳಲ್ಲಿ ಮುರಿಯದ ವ್ಯಾಜ್ಯಗಳು ಇಲ್ಲಿ ಮುರಿತು ಶ್ರೀ ಕ್ಷೇತ್ರವೊಂದು ದೊಡ್ಡ ನ್ಯಾಯಾಸ್ಥಾನವೇ ಆಗಿತ್ತು. ಈಗಲೂ ಆಗಿದೆ. ಶ್ರೀಗಳವರು ಎರಡೂ ಪಕ್ಷದವರನ್ನು ನಿರ್ದಿಷ್ಟಪಡಿಸಿದ ದಿನಕ್ಕೆ ಸರಿಯಾಗಿ ಶ್ರೀ ಮಠಕ್ಕೆ ಬರಮಾಡಿಕೊಳ್ಳುವುದು. ಇಬ್ಬರ–ವಾದ–ವಿವಾದಗಳನ್ನು ಗ್ರಹಿಸಿ ತೀರ್ಪು ಕೊಟ್ಟರಾಯಿತು. ಅದೇ ಶಾಸನ. ಇಬ್ಬರೂ ಒಪ್ಪಲೇ ಬೇಕು. ಆಮೇಲೆ ಮಠದಲ್ಲಿ ಎರಡೂ ಪಕ್ಷದವರು ಸ್ನಾನ ಪೂಜಾದಿಗಳನ್ನು ಮಾಡಿ ಒಂದೇ ಪಂತಿಯಲ್ಲಿ ಕುಳಿತು ಪ್ರಸಾದ ಸ್ವೀಕರಿಸಿ ಪುನಃ ಎಂದಿನಂತೆ ಅನ್ಯೋನ್ಯವಾಗಿ ನಡೆದುಕೊಳ್ಳಬೇಕು ಹೋರಡುವಾಗ ಇಬ್ಬರೂ ಶ್ರೀಗಳವರಿಗೆ ನಮಸ್ಕರಿಸಿ ಅನ್ಯೋನ್ಯವಾಗಿ ನಡೆದುಕೊಳ್ಳುತ್ತೇವೆಂದು ಹೇಳಿ ಹೋಗಬೇಕು. ಸಮಾಜದೊಡನೆ ಇಷ್ಟೊಂದು ಅನ್ಯೋನ್ಯತೆ ಪಡೆದ ಮಠಗಳು ತೀರ ಅಪರೂಪ. ಸಿದ್ಧಗಂಗಾ ಮಠ ಸಮಾಜಕ್ಕೆ ಸರ್ವವಿಧದಲ್ಲೂ ಬೇಕು; ಅದರಂತೆ ಮಠಕ್ಕೂ ಸಮಾಜ ಬೇಕು. ಸಮಾಜಕ್ಕೂ ಮಠಕ್ಕೂ ಅನ್ಯೋನ್ಯ ಸಂಬಂಧ. ಇಂದಿಗೂ ಉಳಿದು ಬಂದಿರುವ ಸಂಪ್ರದಾಯವಾಗಿದೆ. ಸಮಾಜದವರು ಆ ಮಠವನ್ನು ತಮ್ಮ ಮನೆಯಂತೆಯೇ ಭಾವಿಸಿ ನಡೆದುಕೊಳ್ಳುತ್ತಿದ್ದಾರೆ. ಅಲ್ಲಿಯ ದಾಸೋಹಕ್ಕೆ ಮೊದಲು ಬಿಟ್ಟಕುಂಬಳಕಾಯಿ ತರಕಾರಿ ಮೀಸಲು. ತೋಟನಲ್ಲಿ ಬಿದ್ದ ಅಡಿಕೆಯ ಪಟ್ಟೆ ಮಠಕ್ಕೆ ಮೀಸಲು, ಸಮಾಜದಲ್ಲಾಗುವ ಶುಭಶೋಭನಗಳಲ್ಲಿ ಮಠದಕಾಯಿ ದಕ್ಷಿಣೆ ಮೀಸಲು. ಜಾತ್ರೆ ಬಂದರೆ ನೋಡಬೇಕು ಶುಚಿ

ಭೂರ್ತರಾಗಿ ಹೆಣ್ಣು ಗಂಡುಮಕ್ಕಳು ತಮ್ಮ ತಮ್ಮ ತಲೆಯ ಮೇಲೆ ತಾವು ಬೆಳೆದು ತೆಗೆದಿಟ್ಟ ದವಸ ಧಾನ್ಯಗಳನ್ನು ಹೊಯ್ದುಕೊಂಡು ಬಂದು ಶ್ರದ್ಧೆಯಿಂದ ಅರ್ಪಿಸುತ್ತಾರೆ. ನ್ಯಾಯದಲ್ಲಂತೂ ಮಠದ ಶ್ರೀಗಳ ಮಾತನ್ನು ಮೀರುವವರೇ ಇಲ್ಲ. ಇಂಥ ಕ್ರಿಯೆಯಿಂದ ಸಾಮಾಜಿಕ ನೆಮ್ಮದಿ ಶಾಂತಿ ಕುದುರುವುದೆಂಬುದನ್ನು ಹೇಳಬೇಕಾಗಿಲ್ಲವಷ್ಟೆ. ನ್ಯಾಯ ಕೇವಲ ವೀರಶೈವರದೇ ಎಂದು ಭಾವಿಸಬಾರದು. ಉದ್ದಾನ ಶಿವಯೋಗಿಗಳವರು ಆ ಭಾವನೆಯನ್ನು ಇಟ್ಟು ಕೊಂಡವರಲ್ಲ, ಎಲ್ಲ ಕೋಮಿನವರೂ ಉದ್ದಾನ ಶಿವಯೋಗಿಗಳಲ್ಲಿ ಭಯ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು; ಮಹಮದೀಯರೂ ಹೊರತಾಗಿರಲಿಲ್ಲ. ಊಟದಲ್ಲಿ, ಉಪಚಾರದಲ್ಲಿ, ಮಠದ ಸೇವೆಯಲ್ಲಿ; ಮಠಕ್ಕೆ ದಾನ ಮಾಡುವುದರಲ್ಲಿ ವ್ಯಾಜ್ಯ ಬಗೆ ಹರಿಸಿಕೊಳ್ಳುವುದರಲ್ಲಿ ಓದುವಲ್ಲಿ ಬರೆಯುವಲ್ಲಿ—ಎಲ್ಲದರಲ್ಲೂ ಶ್ರೀ ಮಠ ಸರ್ವಲೋಕೋಪಕಾರ ಮನೋಭಾವ ಉಳ್ಳದ್ದು. ಅಲ್ಲಿ ಜಾತಿ ಗೀತಿಗಳನ್ನು ಹರಸಿ ಉಪಕಾರಮಾಡಬೇಕು ಬೇಡ ಎಂಬ ಪ್ರಶ್ನೆಯೇ ಇಲ್ಲ. ಇಂದಿಗೂ ಅದೇ ಹರಿ ಪಾಠ 1917 ನೆಯ ಇಸವಿಯಲ್ಲಿಯೇ ಉದ್ದಾನ ಶಿವಯೋಗಿಗಳು ತಮ್ಮ ಮಠದಲ್ಲಿ ಸಾರ್ವಜನಿಕ ಉಚಿತ ಅಶನ ವಸತಿಯ ವಿದ್ಯಾರ್ಥಿನಿಲಯ ತೆರೆದರು. ಆ ಕಾಲ ಸಾರ್ವಜನಿಕ ವಿದ್ಯಾರ್ಥಿನಿಲಯ ತೆರೆಯಲು ಸರಕಾರವೂ ಹೆದರುತ್ತಿದ್ದ ಕಾಲ. ಸರಕಾರವೇ ಕೋಮುವಾರು ವಿದ್ಯಾರ್ಥಿನಿಲಯಗಳನ್ನು ತೆರೆಯುತ್ತಿತ್ತು. ಆ ಕಾಲದಲ್ಲಿ ಉದ್ದಾನ ಶಿವಯೋಗಿಗಳು ತಮ್ಮ ಮಠದಲ್ಲಿ ಸಾರ್ವಜನಿಕ ಉಚಿತ ವಿದ್ಯಾರ್ಥಿನಿಲಯ ತೆರೆದು ಎಲ್ಲ ಕೋಮಿನವರನ್ನು ಸೇರಿಸಿಕೊಂಡಿದ್ದರು. ಅಲ್ಲದೆ ಆ ಕಾಲ ಸಂಸ್ಕೃತವನ್ನು ಎಲ್ಲರೂ ಓದಲು ಶಕ್ಯವಿಲ್ಲದ ಕಾಲ. ಆಗ ಓದುವವರಿದ್ದರೂ ಪಾಠವನ್ನು ಹೇಳುವವರೂ ಸಿಗದಿದ್ದ ಕಾಲ. ಆ ಕಾಲದಲ್ಲಿ ಸಂಸ್ಕೃತವನ್ನು ಎಲ್ಲರೂ ಓದಬಹುದೆಂದು ಪ್ರಥಮತಃ ಸಾರಿ ಅದರಂತೆ ಎಲ್ಲ ಕೋಮಿನವರಿಗೂ ಸಂಸ್ಕೃತವನ್ನೋದಲು ಅವಕಾಶ ಕಲ್ಪಿಸಿದವರು. ಶ್ರೀ ಶಿವಯೋಗಿಗಳೊಬ್ಬರೇ ಎಲ್ಲರೂ ಸಂಸ್ಕೃತವನ್ನೋದಲು ಅವಕಾಶ ಕಲ್ಪಿಸಿ ಕೊಟ್ಟ ಪಾಠಶಾಲೆ ಅಂದಿನ ಸಿದ್ಧಲಿಂಗೇಶ್ವರ ಸಂಸ್ಕೃತ ಮಹಾ ಪಾಠಶಾಲೆ ಇಂದಿನ ಸಂಸ್ಕೃತ ಮಹಾ ಪಾಠಶಾಲೆ (ಕಾಲೇಜು). ಅಂದಿನ ಕಾಲದಲ್ಲಿ ಉದ್ದಾನ ಶಿವಯೋಗಿಗಳವರ ಒಂದು ದೊಡ್ಡ ಪವಾಡವೇ ಆಗಿತ್ತು.

**“ವಜ್ರಾದಪಿಕಠೋರಾಣಿ—ಮೃದೂನಿ ಕುಸುಮಾದಪಿ” ಚೇತಸ್ಸುಳ್ಳ ಶಿವಯೋಗಿ :–**

ಉದ್ದಾನಪ್ಪನವರು ಹುಟ್ಟು ಕಟುಉಗ್ರವಾದಿಗಳು. ಅವರದು ವೀರಭದ್ರನ ಅಂಶ. ವೀರವಿರುವುದು ಭದ್ರಕ್ಕೆ. ಅವರಿಗೆ ಕೋಪವಿತ್ತು. ಆ ಲೋಕವನ್ನು ತಿದ್ದುವುದಕ್ಕೆ ಪ್ರಯೋಗವಾಗುತ್ತಿದ್ದಿತಲ್ಲದೆ ಪ್ರಳಯಕ್ಕಲ್ಲ. ಅವರ ಅನೇಕ ಉತ್ತಮ ನಿರ್ಧಾರಗಳಿಗೆ ಅಡೆತಡೆಯನ್ನು ತಂದೊಡ್ಡುವವರ ವಿಷಯದಲ್ಲಿ ಉಗ್ರರಾಗಿಬಿಡುತ್ತಿದ್ದರು. ಅವರು ಉಗ್ರತ್ವ ಪ್ರಸಂಗದಲ್ಲಿ ವಜ್ರದಂತೆ ಕಠೋರವಾಗಿರುತ್ತಿತ್ತಾದರೂ, ಮರುಕ್ಷಣದಲ್ಲಿ ಕುಸುಮಸದೃಶ ತಮ್ಮ ಕೋಮಲ ಅಂತರಂಗವನ್ನೇ ಬಿಚ್ಚಿತೋರಿಸಿಬಿಡುತ್ತಿದ್ದರು, ಲೋಕಕ್ಕೆ ಪಾಠಕಲಿಸುವಾಗ ಶಿಕ್ಷೆ ಅನಿವಾರ್ಯವೆಂಬುದು ಅವರ ವಾದ. ಲೋಕವನ್ನು ಶಿಕ್ಷೆಯಿಂದಲೇ ದಾರಿಗೆ ತರಬೇಕೆನ್ನುವ ಮನೋಭಾವದವರಲ್ಲಿ ಉದ್ಧಾನ ಶಿವಯೋಗಿಗಳೂ ಒಬ್ಬರು. ಆದ್ದರಿಂದಲೇ ಅವರು ಕಠಿಣವಾಗಿ ವರ್ತಿಸುತ್ತಿದ್ದುದುಂಟು. ಓದದಿರುವ ವಿದ್ಯಾರ್ಥಿಗಳಿಗೆ ಸೋಮಾರಿಗಳಿಗೆ, ವೈಗಳ್ಳರಿಗೆ ಶಿಕ್ಷೆ ತಪ್ಪಿದ್ದೇ ಅಲ್ಲ. ಹಾಗೆ ಶಿಕ್ಷೆಕೊಟ್ಟ ನಂತರ ಸ್ವಲ್ಪ ಹೊತ್ತಿನ ಮೇಲೆ ಪುನಃ ಹತ್ತಿರಕ್ಕೆ ಕರೆದು ಸಕ್ಕರೆ ಬಾಳೇಹಣ್ಣು ಉತ್ತುತ್ತಿಯೇ ಮೊದಲಾದವುಗಳನ್ನು ಕೊಟ್ಟು “ಇನ್ನು ಮೇಲೆ ಚೆನ್ನಾಗಿ ಓದು; ಚೆನ್ನಾಗಿ ಊಟಮಾಡಬೇಕು, ಚೆನ್ನಾಗಿ ಕೆಲಸಮಾಡಬೇಕು; ಚೆನ್ನಾಗಿ ಓದಬೇಕು ತಿಳಿಯಿತೋ” ಎಂದು ಹೇಳಿ ಕಳಿಸುತ್ತಿದ್ದುದು ಉಂಟು. ತಮ್ಮ ನೆಚ್ಚಿನ ಶಿಷ್ಯರೂ ತಮ್ಮ ಕಾರುಣ್ಯಾಮೃತ ಜಲಧಾರಾ ಪಾತಮಾಡಿ ಕ್ಷೇತ್ರದ ಉತ್ತರಾಧಿಕಾರಿಗಳನ್ನಾಗಿ ಮಾಡಿಕೊಂಡ ಶ್ರೀ ಶಿವಕುಮಾರ ಸ್ವಾಮಿಗಳನ್ನು ಅವರು ಹನ್ನೊಂದು ವರ್ಷಗಳ ಕಾಲ ಕಠಿಣ ಶಿಕ್ಷೆಗೆ ಒಳಪಡಿಸಿ ಕಡಿತಕ್ಕೆ ಬಡಿತಕ್ಕೆ ತಂದು ಕಾಸಿ ಕರಗಿಸಿ ತಿಕ್ಕಿ ಉಜ್ಜಿ, ಅಪರಂಜಿಯನ್ನಾಗಿ ಮಾಡಿ ಶಿವನ ಕಂಠಾಭರಣಗೊಳಿಸಿದರೆಂದಮೇಲೆ ಲೋಕಲೌಕಿಕರ ಬಗೆಗೆ ಹೇಳುವುದೇನಿದೆ. ‘ಅರಿಣ್ಯಾಕಸೋಪಿ ಲೌಕಿಕಜ್ಞಾವಯಂ’ ಈ ಮಾತು ಉದ್ಧಾನಪ್ಪನವರಿಗೆ ಪೂರ್ಣ ಅನ್ವಯಿಸುತ್ತಿತ್ತು. ಅರಣ್ಯದಲ್ಲಿರುವ ಸಂನ್ಯಾಸಿಸದೃಶವಾದ ನಾಡ ನುಡಿಯವರಾಗಿದ್ದರೂ ಲೋಕಲೌಕಿಕದ ಅಪಾರ ಅನುಭವಗಳಿಸಿದ್ದ ಅವರು ಲೋಕದ ಜನರ ಸುಖ–ದುಃಖ, ನೋವು-ನಲಿವು, ಹಾನಿವೃದ್ಧಿಗಳ ಬಗೆಗೆ ಪೂರ್ಣಾನುಭವಗಂಡವರು. ಅಂಥ ಸಮಾಜದ ಮಧ್ಯದಲ್ಲಿ ಹುಟ್ಟಿ ಬೆಳೆದು ಸಮಾಜದ ಅಂತರದ ಲೋಪದೋಷಗಳನ್ನು ತಿದ್ದಿ ದಾರಿಗೆ ತರುವ ವಿಷಯದಲ್ಲಿ ಅಪಾರ ಆಸ್ಥೆವಹಿಸುತ್ತಿದ್ದರು. ನ್ಯಾಯ ನಿಷ್ಠುರವಾಗಿಯೇ ಅಂಥಸಮಯದಲ್ಲಿ ವರ್ತಿಸಿ ಅನ್ಯಾಯಕ್ಕೊಳಗಾದವರಿಗೆ, ಶೋಷಣೆಗೆ ಸಿಕ್ಕಿದವರಿಗೆ, ನ್ಯಾಯ ದೊರಕಿಸಿಕೊಡುತ್ತಿದ್ದರು. ಮಾತು ಕೇಳದ ದುಷ್ಟ ಜನಗಳನ್ನು ತಮ್ಮ ಯೋಗಸ್ಥಿತಿಯನ್ನು ಪ್ರಕಟಮಾಡಿಯಾದರೂ ದಾರಿಗೆ ತರುತ್ತಿದ್ದರು. ಅಂತೆಯೇ ಜನ ಸಿದ್ಧಗಂಗೆಯ ಉದ್ದಾನಪ್ಪನವರ ಹೆಸರೆತ್ತಿದರೆ ಸಾಕು ನಡುಗುತ್ತಿದ್ದರು. ಸಮಾಜಕ್ಕೆ ಈ ತೆರನಾದ ಬಂಧುವನ್ನು ಇನ್ನೆಲ್ಲಿ ತರಲಾದೀತು. ತಾವು ಸನ್ಯಾಸಿಗಳಾಗಿ ಸಮಾಜದ ತಂಟೆ ನಮಗೇಕೆಂದೂ ತಾವುಂಟೋ ಮೂರು ಲೋಕವುಂಟೋ ಎಂದು ಅವರು ಎಂದೂ ಕೈ ಕಟ್ಟಿ ಕುಳಿತವರಲ್ಲ. ಎಷ್ಟೋ ಸಂದರ್ಭದಲ್ಲಿ ಹಳ್ಳಿ ಹಳ್ಳಿಗಳಿಗೆ ಹೋಗಿ ಅಲ್ಲಿನ ಸಮಸ್ಯೆಗಳನ್ನು ತಾವೇ ನಿವಾರಿಸಿಬಿಡುತ್ತಿದ್ದರು. ಅಂಥ ಸಮಯದಲ್ಲಿ ಒಮ್ಮೊಮ್ಮೆ ವಜ್ರದಂತೆ ಕಠೋರವಾಗಿ

ಒಮ್ಮೊಮ್ಮೆ ಕುಸುಮದಂತೆ ಮೃದುವಾಗಿ ವರ್ತಿಸುತ್ತಾ ವ್ಯವಹರಿಸುತ್ತಿದ್ದ ಅವರ ವ್ಯವಹಾರ ಕೌಶಲ್ಯವನ್ನು ಇಂದಿಗೂ ಜನ ಹಾಡಿ ಹೊಗಳುತ್ತಿದ್ದಾರೆ. ಉದ್ದಾನ ಶಿವಯೋಗಿಗಳು ಕೋಪವೆಂಬುದು ಒಂದು ರೀತಿಯ ಅನುಗ್ರಹವಲ್ಲದೆ ಅದಕ್ಕೆ 'ಕೋಪ' ಶಬ್ದದ ಬಳಕೆಯೇ ಅಪಾರ್ಥದ್ದು, ಅನುಗ್ರಹಕ್ಕಾಗಿ ಕೋಪ; ಕೋಪವೇ ಅನುಗ್ರಹ; ಹೊರವೈಗೆ ಕೋಪದಂತೆ ಕಾಣುವ ಅನುಗ್ರಹ ಉದ್ದಾನಸ್ವಾಮಿಗಳ ಚರ್ಯೆಯ ಒಂದು ಪ್ರಧಾನ ಗುಣ. ನಿರ್ಗುಣರಾದ ಯೋಗೀಶ್ವರರ ದೇಹ ಕರ್ಮ ಗುಣದಲ್ಲಿ ದೋಷವನ್ನು ಅರಸುವುದು ಶಕ್ಯವೇ ಇಲ್ಲ. ಇಷ್ಟೆಲ್ಲ ಲೌಕಿಕದಲ್ಲಿ ಉದ್ದಾನ ಶಿವಯೋಗಿಗಳು ಮುಳುಗಿದಂತೆ ಲೋಕದ ಕಣ್ಣಿಗೆ ಕಂಡರೂ ನಿರ್ಲೇಪತತ್ವವೇ ಅವರ ಪ್ರಮುಖ ಚರ್ಯೆಯಾಗಿತ್ತು. ಒಮ್ಮೊಮ್ಮೆ ಅವರು ಲೋಕಜೀವನದ ಅಸಭ್ಯತೆಗಳನ್ನು ನೇರವಾಗಿ ಖಂಡಿಸಿಬಿಡುತ್ತಿದ್ದರಂತೆ. ತಮ್ಮ ಅಸಭ್ಯ ವರ್ತನೆಗಳನ್ನು ತಾವೇ ಖಂಡಿಸಿಕೊಳ್ಳುತ್ತಿದ್ದರು. ಇಲ್ಲಿ ಅಸಭ್ಯ ವರ್ತನೆ ಎಂದರೆ ಅನ್ಯಥಾ ಭಾವಿಸಬಾರದು. ಶಿವಯೋಗಿಗಳ ಮೈ ಕೈಗಳಿಗೆ ಕಜ್ಜಿಯ ತುರಿ ಅಂಟಿತ್ತು. ತಮ್ಮ ಕೈಗಳಿಂದ ತಾವೇ ತಮ್ಮ ಕಜ್ಜಿಯನ್ನು ತುರಿಸಿಕೊಳ್ಳುತ್ತಿದ್ದರಂತೆ. ಆ ಕೂಡಲೇ ಏನೋ ಹೊಳೆದಂತಾಗಿ 'ಥೂ' ಕಪಿ ಚೇಷ್ಟೆ ಎಂದು ಕೈ ಕಟ್ಟಿ ಕಣ್ಣುಮುಚ್ಚಿ ಕುಳಿತುಬಿಟ್ಟರಂತೆ. ಪುನಃ ಮೈ ಕೈಗಳನ್ನು ಎಂದೂ ತುರಿಸಿಕೊಳ್ಳಲಿಲ್ಲವಂತೆ. ಇಂಥ ಕಠೋರ ನೈಷ್ಠುರ್ಯವನ್ನು ಅವರು ತಮ್ಮ ವಿಷಯದಲ್ಲೂ ವ್ಯಕ್ತಪಡಿಸುತ್ತಿದ್ದರು. ಇಂಥ ಅನೇಕ ಚರ್ಯೆಗಳು ಅವರ ಜೀವನದಲ್ಲಿ ಅಲೋಕ ಸಾಮಾನ್ಯವೆನಿಸಿದ್ದವು. ಅವರ ಅಂತರ್ಯದ ಬಹುಭಾಗ ಯಾರಿಗೂ ತಿಳಿಯುತ್ತಿರಲಿಲ್ಲ. ಅಂತೆಯೇ ಅವರ ಸಂಕಲ್ಪ ಶಕ್ತಿ ಪ್ರಬಲಗೊಂಡು ಯಾವುದು ಅವರ ಯೋಚನೆಯೋ ಅದು ಸಿದ್ಧಿಸುವುದಕ್ಕೆ ಕಾಲಾವಕಾಶವೇ ಬೇಕಾಗುತ್ತಿರಲಿಲ್ಲ. ಅವರ ಯೋಚನೆಯೇ ಕಾರ್ಯವನ್ನು ಎಳೆದುಕೊಂಡು ಬಂದು ಬಿಡುತ್ತಿತ್ತು. ಇದು ಅವರ ಸಂಕಲ್ಪ ಶಕ್ತಿಯ ಪ್ರಾಬಲ್ಯವನ್ನು ಸೂಚಿಸುತ್ತದೆ ಅವರು ಮಠಾಧಿಪತ್ಯ ವಹಿಸಿಕೊಂಡ ಹೊಸದರಲ್ಲಿ ಮೂರು ತಿಂಗಳವರೆಗೆ ಅಡವಿಸ್ವಾಮಿಗಳವರಿಂದ ನಡೆಸಿಕೊಂಡು ಬರುತ್ತಿದ್ದ ದಾಸೋಹ ವ್ಯವಸ್ಥೆಯನ್ನು ನಡೆಸಿಕೊಂಡು ಬರುತ್ತಿರುವುದು ತೀರಾ ದುಸ್ತರವಾಗಿ ಚಿಂತಾಮಗ್ನರಾಗಿ ಏನೂ ತೋಚದವರಂತೆ ಇದ್ದರು. ಅಂಥ ಸಮಯದಲ್ಲಿ ಅಮ್ಮನವರ ಗವಿಯನ್ನು ಪ್ರವೇಶಿಸಿ ದಿನವಿಡೀ ಅಲ್ಲಿ ಧ್ಯಾನ ಮಗ್ನರಾಗಿ ಕುಳಿತುಬಿಡುತ್ತಿದ್ದರು.[19] ಗುರುಗಳಾದ ಅಟವೀಸ್ವಾಮಿಗಳು ಶಿವ

19. ಶ್ರೀ ಮಠದ ಅತ್ಯಂತ ಪ್ರಮುಖ ಮಹತ್ವಪೂರ್ಣ ಗವಿಯೇ ಅಮ್ಮನವರ ಗವಿ. ಈ ಗವಿಯಲ್ಲಿಯೇ ಹಿಂದಿನ ಹರದನ ಹಳ್ಳಿಯ ಚೆನ್ನಬಸವೇಶ್ವರ, ತೋಂಟದ ಸಿದ್ಧಲಿಂಗೇಶ್ವರರು ಗೋಸಲೇಶ್ವರ, ಶಂಕರಾಚಾರ್ಯ, ಅನುಷ್ಠಾನಮಾಡಿದುದು. ಈಗಿರುವ ಗವಿಯ ಒಳ ಉತ್ತರಭಾಗದಲ್ಲಿ ಒಂದು ಚಿಕ್ಕ ಬಾಗಿಲು ಈಗಲೂ ಇದೆ. ಉದ್ದಾನ ಸ್ವಾಮಿಗಳವರ ಕಾಲದಲ್ಲಿ ಮುಚ್ಚಲ್ಪಟ್ಟಿತ್ತು. ಉದ್ದಾನಸ್ವಾಮಿಗಳು ಮುಚ್ಚಿದ ಆ ಬಾಗಿ



ಯೋಗ ಸಮಾಧಿಯಲ್ಲಿ ಕುಳಿತ ಇವರನ್ನು ಎಚ್ಚರಿಸಿ ಎದರಬೇಡ ನಾನಿದ್ದೇನೆ ನನ್ನ ಗದ್ದುಗೆಯ ಕೆಲಸ ಪ್ರಾರಂಭಿಸು ಎಂದು ಹೇಳಿ ಹೋದಾಗಿನಿಂದಲೇ ಇವರ ಜೋಳಿಗೆಗೆ ಎಂದೂ ಕೊರತೆ ಬರಲಿಲ್ಲ. ಜೋಳಿಗೆ ಅಕ್ಷಯಪಾತ್ರೆಯಾಗಿ ಹೋಯಿತು. ಆದರೆ ಅದು ಕಾಡಿಬೇಡಿತಂದು ದಾಸೋಹ ಮಾಡುವ ಜೋಳಿಗೆಯಾಗಿರಲಿಲ್ಲ. ಕಾಡದೆ ಬೇಡದೆ ಆ ಜೋಳಿಗೆ ತುಂಬುತ್ತಿತ್ತು. ಮಠದ ಪಕ್ಕದಲ್ಲಿರುವ ದೇವರಾಯಪಟ್ಟಣ, ಮಾರನಾಯಕನ ಪಾಳ್ಯ, ಅರೆಪಾಳ್ಯದವರೂ, ಗೂಳ್ಯ, ಪುರುಷನಹಳ್ಳಿ ಅಂಬಲಗೆರೆ, ಕೋರ, ಮೆಳೇಹಳ್ಳಿ, ಚಿಕ್ಕಹಳ್ಳಿ, ಶಿವಗಂಗೆಯ ಸುತ್ತಮುತ್ತಣ ಅನೇಕ ಗ್ರಾಮಗಳ ಭಕ್ತರು ಸಕಲೇಶಪುರ ಪ್ರಾಂತದ ಅನೇಕ ಶ್ರೀಮಂತವರ್ಗದವರು ಶ್ರೀಗಳವರ ಪ್ರಭಲ ಆಕರ್ಷಣೆಗೊಳಗಾಗಿ ಮಠದ ಬೆಂಬಲಕ್ಕೆ ನಿಂತರು. ಶ್ರೀಗಳವರು ಮಠದ ಜೀರ್ಣೋದ್ಧಾರಕ್ಕೆ ಟೊಂಕ ಕಟ್ಟಿ ನಿಂತರು. ಸ್ವತಃ ಕೈಯಲ್ಲಿ ಹಾರೆ ಗುದ್ದಲಿ ಹಿಡಿದು 1901–1902 ನೆಯ ಇಸ್ವಿಯ ಸುಮಾರಿನಲ್ಲೇ ಮಠದಲ್ಲಿ ಅಭಿವೃದ್ಧಿ ಕಾರ್ಯಗಳೂ ಜೀರ್ಣೋದ್ಧಾರ ಕಾರ್ಯಗಳು ಭರದಿಂದ ನಡೆಯತೊಡಗಿದವು. ಮಠದ ಪ್ರವೇಶದ್ವಾರದ ದೊಡ್ಡ ಕಲ್ಯಾಣಿಯನ್ನು ಕಟ್ಟುವ ಕಾರ್ಯ ಕ್ಷೇತ್ರದ ಆವಶ್ಯಕತೆಗಳನ್ನು ಪೂರೈಸುವ ಎರಡು ಮೂರು ಬಾವಿಗಳ ಕೆಲಸ ಅಡವಿಸ್ವಾಮಿಗಳ ಗದ್ದುಗೆಯ ಕಟ್ಟಡ, ಮಹಾನವಮಿ ಮಂಟಪ, ಈಗಿನ ದಾಸೋಹದ ಮನೆಯ ಭವ್ಯ ಕಟ್ಟಡ, ಈಗಿನ ಆಫೀಸ್ ರೂಂ ಇರುವ ದೊಡ್ಡ ಕಟ್ಟಡ, ಹಳೆಯ ಮಠದ ಜೀರ್ಣೋದ್ಧಾರ ಕಾರ್ಯ ಎಲ್ಲವನ್ನು ಒಂದೊಂದಾಗಿ ನಿರ್ಮಾಣ ಮಾಡುವ, ಜೀರ್ಣೋದ್ಧಾರ ಮಾಡುವ ಕಾರ್ಯ ಬರದಿಂದ ನಡೆದು ಹೋದವು. ಸ್ವಲ್ಪ ಭೂಮಿ ಕಾಣಿಕೆಯನ್ನು ಕೊಂಡು ವ್ಯವಸಾಯ ಪ್ರಾರಂಭವಾಯಿತು. ಸ್ವತಃ ಉದ್ದಾನ ಶಿವಯೋಗಿಗಳೇ ಪ್ರಥಮತಃ ವ್ಯವಸಾಯಕ್ಕಿಳಿದರು. ವ್ಯವಸಾಯವನ್ನು ರೂಢಿಸುತ್ತಾ ತಮ್ಮ ಜೀವಿತಾವಧಿಯವರೆಗೆ 16 ಎಕರೆಗಳಷ್ಟು ಹೊಲಗದ್ದೆಗಳನ್ನು ರೂಢಿಸತೊಡಗಿದರು. ಎಷ್ಟೋವರ್ಷ ಸ್ವತಃ ತಾವೇ ರಂಟೆಕುಂಟೆಗಳನ್ನ ಹೊಡೆದರು. ಸ್ವತಃ ಕಾಯಕ ಮಾಡಿ ತಮ್ಮ ಲಾಂಛನದ ಹಂಗು ಹರಿದರು. ಲೋಕಕ್ಕೆ ಕಾಯಕದ ಮಹತ್ವವನ್ನ ರುಹಿದರು. ಹಳೆಯ ಸಂಸ್ಕೃತ ಪಾಠಶಾಲೆ 1917 ನೆಯ ಇಸ್ವಿಯ ಹೊತ್ತಿಗೆ ಸರ

ಲನ್ನು ದಾಟಿ ಒಳಗೆ ಹೋಗುತ್ತಿದ್ದರಂತೆ ಒಳಭಾಗದಲ್ಲಿ ಒಂದು ಚಿಕ್ಕ ಝರಿ ಸದಾ ಹರಿಯುತ್ತಿತ್ತಂತೆ. ಒಂದು ನಂದಿ ಕೋಲಾಟವಾಡುವಷ್ಟು ವಿಶಾಲತೆ ಅಲ್ಲಿರುವುದೆಂದು ಆ ವಿಶಾಲ ಭಾಗ ದಾಟಿ ಮುಂದೆ ಹೋದರೆ ಅಲ್ಲಿ ಅನೇಕ ಸಿದ್ಧಪುರುಷರು ಪದ್ಮಾಸೀನರಾಗಿ ಕುಳಿತಂತೆ ಇರುವ ಅಸ್ಥಿಪಂಜರಗಳು ಇನ್ನೂ ಇವೆಯೆಂದೂ ಉದ್ದಾನಸ್ವಾಮಿಗಳು ಹೇಳುತ್ತಿದ್ದುದಾಗಿ ದೀರ್ಘಕಾಲ ಸಿದ್ಧಲಿಂಗೇಶ್ವರರ ಪೂಜೆಮಾಡಿಕೊಂಡಿದ್ದ ಲಿಂಗೈಕ್ಯರಾದ ಆ ಜನ್ಮಬ್ರಹ್ಮಚಾರಿ ಶ್ರೀ ಗಂಗಾಧರದೇವರು ನನ್ನೆದುರಿಗೆ ಅನೇಕ ಸಲ ಕಥೆಮಾಡಿ ಹೇಳುತ್ತಿದ್ದರು. ಈಗ ಆ ಒಳಭಾಗವನ್ನು ಪ್ರವೇಶಿಸದ ಹಾಗೆ ಮುಚ್ಚಿಬಿಡಲಾಗಿದೆ. ಅದರ ಗುರುತನ್ನು ಮಾತ್ರ ನಾವೀಗ ಕಾಣಬಹುದಾಗಿದೆ.

ಕಾರದ ಮನ್ನಣೆ ಪಡೆದು ಅಧಿಕೃತವಾಗಿ ಸಿದ್ಧಲಿಂಗೇಶ್ವರ ಸಂಸ್ಕೃತ ಮತ್ತು ವೇದ ಪಾಠಶಾಲೆ ಎಂಬ ಹೆಸರಿನ ಎಲ್ಲ ಮತದವರ ಓದಿಗಾಗಿ ತೆರೆಯಲ್ಪಟ್ಟಿತು. ಉಚಿತ ಅಶನವಸತಿ ನಿಲಯವನ್ನು ತೆರೆದು ಪ್ರಥಮತಃ ಮಠದಲ್ಲಿ 60 ಜನ ವಿದ್ಯಾರ್ಥಿಗಳಿಗೆ ಸೌಕರ್ಯವೊದಗಿಸಿದರು. ಈ ವಿದ್ಯಾರ್ಥಿನಿಲಯ ಎಲ್ಲಾ ಕೋಮಿನವರಿಗೂ ತೆರೆಯಲ್ಪಟ್ಟಿತೆಂಬುದು ಇಲ್ಲಿ ಜ್ಞಾಪಿಸಬೇಕಾದ ಅಂಶ. [20] ಹೀಗೆ ಅವರ ಕ್ರಿಯಾಯೋಗದ ಕಾರುಣ್ಯ ಜಲಧಾರೆಯನ್ನು ಎರೆದು ಮಮತೆಯಿಂದ ಪೋಷಿಸಿ ಬೆಳೆಸಿದ ವಿದ್ಯಾಸಂಸ್ಥೆ ವಿದ್ಯಾರ್ಥಿನಿಲಯಗಳು ಇಂದು ರಾಷ್ಟ್ರಮಟ್ಟದ ಬೃಹತ್‌ಸಂಸ್ಥೆಗಳಾಗಿ ಬೆಳೆದು ಬೃಹದ್ಭಾರತದ ಅಷ್ಟೇ ಏಕೆ? ವಿಶ್ವದ ಪ್ರಮುಖ ವಿದ್ಯಾಕೇಂದ್ರಗಳಲ್ಲೊಂದೆಂಬ ಖ್ಯಾತಿಯನ್ನು ಗಳಿಸಿದುದು ಶಿವಯೋಗಿಗಳ ಪುಣ್ಯಫಲವೆಂಬುದನ್ನು ಯಾರೂ ಅಲ್ಲಗಳೆಯಲಾಗದು. ಎಷ್ಟೋಸಲ ಶಿಷ್ಯರಾದ ಶ್ರೀ ಶಿವಕುಮಾರ ಸ್ವಾಮಿಗಳವರೇ ಇಷ್ಟೆಲ್ಲ ನಮ್ಮ ಗುರುಗಳ ಪ್ರಭಲ ಸಂಕಲ್ಪ ಶಕ್ತಿಯಫಲ ಎಂದಿದ್ದಾರೆ.

## ಶಿವಯೋಗಿಗಳು ಕಾಯಕ ಸದ್ಭಾವಿಗಳು :

ಉದ್ದಾನಶಿವಯೋಗಿಗಳು ಹುಟ್ಟು ಕಾಯಕ ಸದ್ಭಾವಿಗಳು; ಸಿದ್ಧಗಂಗಾ ಮಠಕ್ಕೆ ಅವರು ಬಂದು ಸೇರಿದುದೂ ಕಾಯಕಕ್ಕೆಂದೇ. ಎಲ್ಲ ವಿಧವಾದ ಶ್ರಮದ ಕೆಲಸಕ್ಕೆ ತಡೆಯಬಲ್ಲ ವಜ್ರಕಾಯ ಅವರದಾಗಿತ್ತು. ಅವರು ಮಾಡಿದ ಸತ್‌ಶುದ್ಧ ಕಾಯಕವೇ ಅವರಿಗೆ ಫಲವನ್ನೆಳೆದುತಂದು ಕೊಟ್ಟು ಅದ್ಭುತ ಪವಾಡವನ್ನಾಗಿಸಿತು. ಸೋಮಾರಿತನವೂ, ಆತ್ಮಪ್ರತ್ಯಯವಿಹೀನತ್ವವೂ ಅವರಿಂದ ಬಹುದೂರ. ಬೆಟ್ಟವನ್ನು ಎತ್ತಿಟ್ಟೇನು ಎನ್ನುವ ಪ್ರಚಂಡ ಆತ್ಮಪ್ರತ್ಯಯ, ಧೈರ್ಯ, ಸಂಕಲ್ಪ ಅವರದಾಗಿದ್ದವು. ಈ ಶಕ್ತಿಗಳು ಅವರಿಗೆ ಅಂದು ತಂದುಕೊಟ್ಟ ಫಲ ಅಷ್ಟಿಷ್ಟಲ್ಲ. ಅಂತೆಯೇ ಉದ್ಯಮಶೀಲರೂ, ಸಾತ್ವಿಕಸ್ವಭಾವದವರೂ, ನಿಷ್ಕಾಮಕರ್ಮದಲ್ಲಿ ನಂಬಿಕೆಯಿರುವವರು ಆದವರನ್ನು ಕಂಡರೆ ಅವರು ಕಾರುಣ್ಯದೋರಿ ಅವರಿಗೆ ಬೇಕಾದ ಸಹಾಯ ಸಂಪತ್ತನ್ನೊದಗಿಸುತ್ತಿದ್ದರು. ದಾಕ್ಷಿಣ್ಯ ಜೀವಿಗಳಂತೂ ಎಂದೂ ಅಲ್ಲ. 'ನ್ಯಾಯ ನಿಷ್ಠೂರಿ ದಯಾದಾಕ್ಷಿಣ್ಯಪರ ನಾನಲ್ಲವಯ್ಯಾ; ಲೋಕವಿರೋಧಿ ಶರಣನಾರಾರಿಗೂ ಅಂಜುವವನಲ್ಲ. .... 'ಎನ್ನುವ ಬಸವಣ್ಣನವರ ವಾಣಿ ಅವರ ಕ್ರಿಯಾ ಮುಖದಲ್ಲಿ ಸದಾ ಪ್ರತ್ಯಕ್ಷವಾಗಿರುತ್ತಿತ್ತು. ತನ್ನವರು, ನನ್ನವರು ಎಂಬ ತುಚ್ಛಭಾವ ಅವರಲ್ಲಿ ಎಂದೂ ತಲೆಹಾಕಲಿಲ್ಲ. ವಿಶ್ವಭ್ರಾತೃತ್ವ, ವಿಶ್ವಕುಟುಂಬತ್ವ, ವಿಶ್ವಕಲ್ಯಾಣತ್ವಾಪೇಕ್ಷೆಯೇ ಅವರ ಹುಟ್ಟುಗುಣ. ವೀರ, ಧೀರ, ಗಂಭೀರ, ಗುಣಶೀಲಸಂಪತ್ತು ಉದ್ದಾನ ಶಿವಯೋಗಿಗಳದು. ಕಾಯಕಷ್ಟ ಮಾಡಿ ದಾಸೋಹ ಮಾಡುವ ಇವರ ದಾಸೋಹ ಕ್ಷೇತ್ರ ಅತ್ಯಂತ ಪರಿಶುದ್ಧವಾದುದು. ಶುದ್ಧಿಯಿಂದ ಸಿದ್ಧಿ ಪಡೆದು, ಶುಚಿಯಿಂದ ರುಚಿಗೊಂಡದ್ದು. ಸತ್ಕರ್ಮಕೌಶಲದಿಂದ ಸತ್ಯಶುದ್ಧವಾದದ್ದು ಶರಣರು ಹೇಳುವ :

ಆನು ಆರಂಭವ ಮಾಡುವೆನಯ್ಯ ಗುರು ಪೂಜೆಗೆಂದು,
ನಾನು ಬೆನಹಾರವ ಮಾಡುವೆನಯ್ಯ ಲಿಂಗಾರ್ಚನೆಗೆಂದು,
ನಾನು ಪರಸೇವೆಯ ಮಾಡುವೆನಯ್ಯ ಜಂಗಮ ದಾಸೋಹಕ್ಕೆಂದು,
ನಾನಾವಾವ ಕರ್ಮಂಗಳಂ ಮಾಡಿದರೆಯೂ ಆ ಕರ್ಮ ಫಲಭೋಗವ ನೀ ಕೊಡುವೆ
ಯೆಂಬುದ ನಾ ಬಲ್ಲೆನು. ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದು ಕ್ರಿಯ
ಮಾಡೆನು; ನಿಮ್ಮ ನೊಮ್ಮಿಂಗೆ ನಲಿಸುವೆನು, ನಿಮ್ಮಾಣೆ ಕೂಡಲ ಸಂಗಮದೇವಾ.

(—ವಚನ ಸಾಹಿತ್ಯ ಸಂಗ್ರಹ ಪು. 245)

ಗುರುವಾದರೂ ಕಾಯಕದಿಂದಲೇ ಜೀವನ್ಮುಕ್ತಿ;
ಲಿಂಗವಾದರೂ ಕಾಯಕದಿಂದಲೇ ಶಿಲೆಯ ಕುರುಹು ಹರಿವುದು.
ಜಂಗಮವಾದರೂ ಕಾಯಕದಿಂದಲೇ ತನ್ನ ವೇಷದ ಪಾಶಹರಿವುದು;
ಗುರುವಾದರೂ ಚರಸೇವೆಯ ಮಾಡಬೇಕು;
ಲಿಂಗವಾದರೂ ಚರಸೇವೆಯ ಮಾಡಬೇಕು;

20. 1917 ನೆಯ ಇಸ್ವಿಯ ಸುಮಾರಿನಲ್ಲಿ ಸರ್ವ ಕೋಮಿನವರ ಉಪಯೋಗಕ್ಕೆ ಸಂಸ್ಕೃತ ಪಾಠಶಾಲೆ, ಉಚಿತ ವಿದ್ಯಾರ್ಥಿನಿಲಯಗಳನ್ನು ತೆರೆದದ್ದು ಅತ್ಯಂತ ಮಹತ್ವದ ಅಂಶ. ಏಕೆಂದರೆ ಆಗ ಸಂಸ್ಕೃತವನ್ನು ಎಲ್ಲ ಕೋಮಿನವರು ಓದಲು ಅವಕಾಶಗಳೇ ಇರಲಿಲ್ಲ. ಓದುವ ಆಕಾಂಕ್ಷೆಯಿದ್ದರೂ ಪಾಠ ಹೇಳುವವರು ಸಿಗುತ್ತಿರಲಿಲ್ಲ. ಅಂಥ ಮಡಿವಂತಿಕೆಯ ಕಾಲದಲ್ಲಿ ಸಂಸ್ಕೃತವು ಒಂದು ಭಾಷೆ; ಅದರಲ್ಲಿನ ಜ್ಞಾನವನ್ನು ಪಡೆಯಲು ಎಲ್ಲರೂ ಅರ್ಹರು ಎಂಬುದನ್ನು ಪ್ರಾಯಶಃ ಭಾರತದಲ್ಲಿ ಪ್ರಥಮತಃ ಉದ್ದಾನಶಿವಯೋಗಿಗಳೇ ಘೋಷಿಸಿ ಆ ವಿದ್ಯಾಭ್ಯಾಸಕ್ಕೆ ಎಲ್ಲಕೋಮಿನವರಿಗೂ ಅನುಕೂಲ ಕಲ್ಪಿಸಿದರೆಂದು ಹೇಳಿದರೆ ತಪ್ಪಾಗದು ಇದರಿಂದ ಇವರು ಸರ್ವ ಸಮಾಜಬಂಧುಗಳ ಗೌರವಾದರಗಳಿಗೂ ಕಾರಣರಾದರು. ಅಲ್ಲದೆ ಎಲ್ಲ ಸಮಾಜದ ಮಕ್ಕಳಿಗೂ ಉಚಿತ ಅಶನ ವಸತಿಗಳ ಏರ್ಪಾಡು ಕೂಡಾ ಅಷ್ಟೆ. ಸರಕಾರದವರೇ ಸಾರ್ವಜನಿಕ ವಿದ್ಯಾರ್ಥಿನಿಲಯ ಸ್ಥಾಪಿಸಲು ಹಿಂದೆ ಮುಂದೆ ನೋಡುತ್ತಿದ್ದ ಕಾಲ ಅದು. ಬೇರೆ ಬೇರೆ ಕೋಮಿನವರಿಗೆ ಪ್ರತ್ಯೇಕ ಅಶನ ವಸತಿನಿಲಯಗಳನ್ನು ಸ್ಥಾಪಿಸುವ ಆ ಕಾಲದಲ್ಲಿ ಉದ್ದಾನಶಿವಯೋಗಿಗಳವರ ಸಾರ್ವಜನಿಕ ಉಚಿತ ವಿದ್ಯಾರ್ಥಿನಿಲಯ ಅವರ ದೂರದರ್ಶಿತ್ವಕ್ಕೆ ಒಳ್ಳೆಯ ನಿದರ್ಶನ. ಸಮಸ್ತ ಕೋಮಿನವರ ಉತ್ಕರ್ಷಕ್ಕೆ ಅವರು ಎಷ್ಟರಮಟ್ಟಿಗೆ ಹೆಣಗುತ್ತಿದ್ದರೆಂಬುದು ಈ ಒಂದು ಅಂಶದಿಂದ ಗೋಚರವಾಗದಿರದು. ಅಂತೆಯೇ ಇಂದಿಗೂ ಆ ಸಂಪ್ರದಾಯದಲ್ಲೇ ವಿದ್ಯಾರ್ಥಿನಿಲಯ ನಡೆಯುತ್ತಾ ಬಂದು ಸುಮಾರು 50 ಕೋಮಿನ ವಿವಿಧ ಸನ್ನಿವೇಶದ ಮಕ್ಕಳಿಗೂ ಧೀನದಲಿತ ವರ್ಗದವರಿಗೂ ಆಶ್ರಯವಿತ್ತು ತನ್ನ ಕೈಲಾದ ನಿಷ್ಪಕ್ಷಪಾತ ಸೇವೆ ಸಲ್ಲಿಸುತ್ತಿದೆ.

ಜಂಗಮವಾದರೂ ಚದಸೇವೆಯ ಮಾಡಬೇಕು.
ಇದು ಚಂದೇಶ್ವರ ಲಿಂಗದ ಅರಿವುಕೇಳಾ ಪ್ರಭುವೇ.

( ವಚನ. ಸಾ. ಸಂಗ್ರಹ. ಪು. 266 )

ಈ ಮಾತುಗಳು ಶ್ರೀಗಳವರ ದಾಸೋಹ ಸದ್ಭಾವಕ್ಕೆ ಪೂರ್ಣ ಅನ್ವಯವಾಗುವಂತಹವುಗಳು. ಇವರ ಓಜೋಮಯವಾದ ಚಟುದಟಿಕೆಗಳು ಆ ಚಟುವಟಿಕೆಗಳ ಮಧ್ಯದಲ್ಲಿನ ಮೇಘಮಂದ್ರಧ್ವನಿಯ ಕಾರಣದಿಂದ ಕ್ಷೇತ್ರದ ಆವರಣವೆಲ್ಲ ಸದಾ ಕಲಕಲನಿನಾದ ಗಂಭೀರವಾಗಿ ಜಾಗೃತವಾಗಿರುತ್ತಿತ್ತು. ಈಗಿನ ಕ್ಷೇತ್ರದ ಅಭ್ಯುದಯದ ಮಹದಂಶವೆಲ್ಲ ಈ ಧೀರಯತಿಪುಂಗವರ ಅಮಿತಕರ್ತೃತ್ವಶಕ್ತಿ ಶಿವೈಕ ಚಿತ್ತ ಪ್ರಕರ್ಷದ ಫಲ. ಗಂಭೀರ ಮುಖಮುದ್ರೆಯಲ್ಲಿ ಶಿವಯೋಗ ಶಕ್ತಿಯ ಫಲವಾಗಿ ಹೊರಹೊಮ್ಮುವ ಅಮಿತ ತೇಜೋರಾಶಿಯಿಂದ ಎಂಥವರನ್ನೂ ತಮ್ಮತ್ತ ಆಕರ್ಷಿಸಿ, ದೃಷ್ಟಿಪಾತದಿಂದಲೇ ಅವರ ಮನೋಭಿತ್ತಿಯ ಮೇಲೆ ಸುಂದರ ರಮ್ಯ ಭಕ್ತಿ ಚಿತ್ರವನ್ನು ಮೂಡಿಸಬಲ್ಲ ಸತ್ವಸಂಪನ್ನರಾಗಿದ್ದರು. ಅಂತೆಯೇ ಅವರ ಅನುಗ್ರಹಕ್ಕೆ ಪಾತ್ರರಾಗಿ ಸುಖಿಗಳಾಗಿರುವವರ ಸಂಖ್ಯೆ ಇಂದೂ ವಿಫಲವಾಗಿದೆ. (ಮುಂದುವರಿಯುವುದು)

---

## ಸಿ ದ್ಧ ರಾ ಮ

—ಡಿ. ಎಸ್. ಚಂದ್ರಶೇಖರ್

ಜಗದಗಲ ಮುಗಿಲಗಲ ಶರಣಲೀಲಾರಂಗ
ಭವದ ಬಾಳಿನ ಸೊಗವ ಸವಿವ ಸಂಭ್ರಮದಂದ ॥ಪ॥
ಕರ್ಮಯೋಗವೆ ಜಗದಿ ಸತ್ಯವೆನ್ನುತ ನುಡಿದ
ಸೊನ್ನಲಿಗೆಯಾ ಮುದ್ದುಗೌಡ ಸುಗ್ಗವ್ವೆಯರ
ಪುಣ್ಯಗರ್ಭದಿ ಸಿದ್ಧರಾಮ ನುದಿಸಿದ ಮಹಿಮ !
ಅಲ್ಲಮ್ಮನ ಅಧ್ಯಾತ್ಮದಾಗಸದ ಎತ್ತರಕೆ
ತಾಮಣಿಯೆನೆನ್ನುತಲಿ. ತಾ ನಿಂತ ನೆಲದಲ್ಲೆ
ಕೆರೆಕಟ್ಟೆ ಕಟ್ಟುತಲಿ ಮುನ್ನೆಡೆದ ಮಹಮಹಿಮ।
ಸಕಲ ಭೂತಂಗಳೊಳ್ ಅನುಕಂಪ ತೋರುತ್ತ
ಕಾಯಕದ ಪರಿ ಪೂರ್ಣ ಸಾಕಾರ ಶಿವ ಸಿದ್ಧ.
ಬಾಲ್ಯದಲ್ಲಿಯೆ ತಾಯಿ ಕೊಟ್ಟ ಮೊಸರನ್ನವನು
ಶಿವನಿಗರ್ಪಿಸಲೋಗಿ ವಿರಹ ವಿಹ್ವಲನಾಗಿ
ಪರಿಪರಿಯ ರೀತಿಯಲಿ ಪರಿತಪಿಸಿ ಶ್ರೀಶೈಲ
ಗಿರಿಶಿಖರ ತಾನೇರಿ ರುದ್ರಗಮ್ಮರಿಗೈದು
ವರ ಮಲ್ಲಿಕಾರ್ಜುನನ ದರ್ಶನವ ತಾ ಪಡೆದ
ಶಿವ ಸಿದ್ಧರಾಮಯ್ಯ ನಿನಗಿದೋ ಶರಣೆಂದೆ ॥

# ದೇವರನ್ನು ಎಚ್ಚರಿಸುವ ಸುಪ್ರಭಾತ

—ಪ॥ ಸಂಜೀವ ಕಾಮತ್.

ಬಹಳ ಸಮಯದ ಹಿಂದೆ ತಿರುಪತಿಯಲ್ಲಿ ಅರ್ಚಕರು ಸುಪ್ರಭಾತವನ್ನು ಹಾಡುತ್ತಿದ್ದುದನ್ನು ಕೇಳಿದ್ದೇವೆ. ಆ ನಂತರ ಅದನ್ನು ರೆಕಾರ್ಡ್ ಮಾಡಿದರು. ಇದರಿಂದ ಅದು ಆಕಾಶವಾಣಿಯಲ್ಲಿ ರೇಡಿಯೋಗಳಲ್ಲಿ ಪ್ರಸಾರವಾಗಿ ಎಲ್ಲರೂ ಕೇಳುವಂತಾಯಿತು. ಇತ್ತೀಚೆಗೆ ಎಲ್ಲಾ ದೇವರುಗಳ ಹೆಸರಿನಲ್ಲಿಯೂ ಸುಪ್ರಭಾತವನ್ನು ಆಲಿಸುವಂತಾಗಿದೆ. ಬ್ರಾಹ್ಮಣ ಪಂಡಿತರಿಗೆ ಸಾಕಷ್ಟು ಹಣ ಕೊಟ್ಟರೆ ಯಾವ ದೇವರ ಹೆಸರಿನಲ್ಲಿಯಾದರೂ ಹಾಡಲು ಬೇಕಾದ 'ಮಸಾಲೆ' ಒದಗಿಸಿಕೊಡುತ್ತಾರೆ. ಆಯಾಯ ದೇವರುಗಳ ಹುಟ್ಟುಲೀಲೆಗಳನ್ನು ಸೇರಿಸಿ ಸ್ಥಳಪುರಾಣದ ಮಹತ್ವವನ್ನು ವರ್ಣಿಸಿ, ಮನರಂಜನೆಯಾಗುವಂತೆ ಹಾಡಿ, ಅದನ್ನು ಟೇಪ್ ರೆಕಾರ್ಡ್ ಮಾಡುವುದರ ಮೂಲಕ ಜನತೆಗೆ ಸಂತೋಷವನ್ನುಂಟು ಮಾಡುತ್ತಾರೆ. ಆದರೆ ಒಂದು ವಿಷಯವನ್ನು ಸರ್ವರೂ ಗಮನಿಸಬೇಕಾದುದು ಅಗತ್ಯ. ಈ ಸುಪ್ರಭಾತ ಯಾರಿಗಾಗಿ-ಎಂಬುದೇ ತಿಳಿಯುವುದಿಲ್ಲ. ಆದಿಕಾವ್ಯ ರಾಮಾಯಣದಲ್ಲಿ ವಿಶ್ವಾಮಿತ್ರರು ರಾಮ ಲಕ್ಷ್ಮಣರನ್ನು ಸಂಬೋಧಿಸುತ್ತಾ:-

**ಕೌಸಲ್ಯಾ ಸುಪ್ರಜಾರಾಮ ಪೂರ್ವಾಸಂಧ್ಯಾ ಪ್ರವರ್ತತೇ ।**
**ಉತ್ತಿಷ್ಠ ನರಶಾರ್ದೂಲ ಕರ್ತವ್ಯಂ ದೈವಮಾಹ್ನಿಕಂ ॥**

"ಕೌಸಲ್ಯೆಯ ನೆಚ್ಚಿನ ನಂದನ ಶ್ರೀರಾಮನೇ! ಸಂಧ್ಯಾ ಸಮಯವು ಪ್ರಾಪ್ತವಾಗಿದೆ. ಆದುದರಿಂದ ಹೇ ಪುರುಷ ವ್ಯಾಘ್ರನೇ! ಎದ್ದೇಳು; ಸಂಧ್ಯೋಪಾಸನೆಯ ಪವಿತ್ರ ಕಾರ್ಯವನ್ನು ಮಾಡುವನಾಗು."

ಎಂಬುವುದಾಗಿ ಹೇಳಿ ಅವರನ್ನು ಎಚ್ಚರಗೊಳಿಸಿ ನಿತ್ಯವಿಧಿಗಳನ್ನು ನೆರವೇರಿಸಲು ಪ್ರೇರಿಸಿದ ಶ್ಲೋಕಗಳನ್ನೂ ಸಹ ಈ ಸುಪ್ರಭಾತದಲ್ಲ ಸೇರಿಸಿದ್ದಾರೆ. ಮರ್ಯಾದಾ ಪುರುಷೋತ್ತಮ ಶ್ರೀರಾಮಚಂದ್ರನನ್ನು ದೇವರ ಸ್ಥಾನಕ್ಕೇರಿಸಿದ ಜನರು, ತಿರುಪತಿ ತಿಮ್ಮಪ್ಪನನ್ನು 'ಗಾಢನಿದ್ರೆ'ಯಿಂದ ಎಚ್ಚರಿಸಲು ಈ ರೀತಿ ಹಾಡಿದರು

**ಉತ್ತಿಷ್ಠೋತ್ತಿಷ್ಠ ಗೋವಿಂದ ಉತ್ತಿಷ್ಠ ಗರುಡಧ್ವಜ ।**
**ಉತ್ತಿಷ್ಠ ಕಮಲಾಕಾಂತ ತ್ರೈಲೋಕ್ಯಂ ಮಂಗಳಂ ಕುರು ॥**



ಮನೆಯಲ್ಲಿ ಜನರು ಮಲಗಿಕೊಂಡೇ ಇದ್ದರೂ ರೇಡಿಯೋ ಹಾಡುತ್ತಿರುತ್ತದಲ್ಲ! ಅದಕ್ಕಾಗಿ ಸಂತೋಷಪಡಬೇಕು. ಈ 'ಆಸ್ತಿಕ' ಮಹಾಶಯರು ಕೌಸಲ್ಯಾನಂದನ ಶ್ರೀರಾಮನನ್ನು, ತಿರುಪತಿ ತಿಮ್ಮಪ್ಪನನ್ನು ಹಾಗೂ ಇತರ ದೇವರುಗಳನ್ನು ಎಬ್ಬಿಸುವುದರಲ್ಲಿ ಆಸಕ್ತರಾಗಿದ್ದಾರಲ್ಲದೆ ತಾವು ಹಾಗು ತಮ್ಮವರು ಬೇಗನೆ ಏಳುವ, ಮತ್ತು ಎದ್ದು ಸಂಧ್ಯಾಗ್ನಿಹೋತ್ರಾದಿಗಳನ್ನು ಮಾಡಬೇಕೆಂಬ ವಿಷಯ ಅವರಿಗೆ ತೋರಲೇ ಇಲ್ಲ. ಹಾಗೆಯೇ ಧರ್ಮಸ್ಥಳದ ಮಂಜುನಾಥ ಸ್ವಾಮಿಯನ್ನು ಕುರಿತು, "**ಎದ್ದೇಳು ಮಂಜುನಾಥ !**............' ಎಂದು ಹಾಡತೊಡಗಿದರು. ಅದೇ ರೀತಿ, "**ಶ್ರೀ ರಂಗನಾಯಕ, ರಾಜೀವಲೋಚನ**..........." ಎಂಬುದಾಗಿಯೂ, "**ಏಳು ನಾರಾಯಣ, ಏಳು ಲಕ್ಷ್ಮೀರಮಣ, ಏಳು ಶ್ರೀಗಿರಿವಾಸ, ಏಳು ಪ್ರಹ್ಲಾದಗೊಲಿದ ದೇವ, ಏಳಯ್ಯ ಬೆಳಗಾಯಿತು**" ಎಂಬಂತಹ ಉದಯರಾಗಗಳನ್ನು ಅನೇಕ ಹಳೆಯ ಸಂಪ್ರದಾಯಸ್ಥರ ಮನೆಯಲ್ಲಿ ಮುದುಕಿಯರು ಬೆಳಗಿನ ಸಮಯದಲ್ಲಿ ಹಾಡುವುನ್ನು ಈಗಲೂ ಕೇಳಬಹುದು. ಈ ಮುದುಕರ ತಲೆಮಾರು ಮುಗಿದ ನಂತರ ಇವುಗಳ ಅಸ್ತಿತ್ವ ಶೂನ್ಯವಿಲೀನವಾದೀತೆಂಬ ಭಯದಿಂದ, ನಮ್ಮ ಈ 'ಆಸ್ತಿಕ' ಬಂಧುಗಳು ಅನೇಕ ದೇವಾಲಯಗಳಲ್ಲಿ ಸ್ಥಳ ಪುರಾಣದ ಮಹತ್ವವನ್ನು ಹೆಚ್ಚಿಸಲು ರಚಿಸಿದ ಸುಪ್ರಭಾತಗಳನ್ನು ಟೇಪ್ ರೆಕಾರ್ಡ್ ಮಾಡಿ ಆ ದೇವರುಗಳ ಅಸ್ತಿತ್ವವನ್ನು ಕಾಪಾಡಲು ಪ್ರಯತ್ನಿಸಿದ್ದಾರೆ,

ಕಲಿಯುಗದಲ್ಲಿ ದೇವರುಗಳು ಅವತಾರವೆತ್ತುವುದಿಲ್ಲವೆಂಬ ಪ್ರತೀತಿ. ಆದರೆ ಅದಕ್ಕೆ ಹತ್ತರಷ್ಟು ದೇವರುಗಳ ಉದಯವಾಗುತ್ತಿದೆ. ಅವರಿಗಾಗಿ ಸುಪ್ರಭಾತದ ಮೂಲಕ ಭಕ್ತಿಪ್ರದವಾದ ರೆಕಾರ್ಡುಗಳೂ ತಯಾರಾಗುತ್ತಿವೆ. ಉದಾ:—ರಾಘವೇಂದ್ರ ಸುಪ್ರಭಾತ, ಸತ್ಯಸಾಯಿ ಸುಪ್ರಭಾತ, ಮಲ್ಲಿಕಾರ್ಜುನ ಸುಪ್ರಭಾತ, ಅಯ್ಯಪ್ಪ ಸುಪ್ರಭಾತ, ಬಸವೇಶ್ವರ ಸುಪ್ರಭಾತ, ಮೂಕಾಂಬಿಕಾ ಸುಪ್ರಭಾತ, ಇತ್ಯಾದಿ ಇತ್ಯಾದಿ. ಮುಂದೆ ಗುರುನಾರಾಯಣ ಸುಪ್ರಭಾತ, ಕೋಟಿ-ಚೆನ್ನಯ್ಯ ಸುಪ್ರಭಾತ, ಬಬ್ಬುಸ್ವಾಮಿ ಸುಪ್ರಭಾತ, ಕಲ್ಕುಡ ಸುಪ್ರಭಾತಗಳು ಬರಲೂಬಹುದು. ಇಷ್ಟೆಲ್ಲಾ ನಡೆಯುವಾಗ ಬಾಹುಬಲಿ ಸ್ವಾಮಿಯವರ ಸುಪ್ರಭಾತವೂ ಬರಬಹುದು. ಇಷ್ಟರಲ್ಲಿಯೇ ಜಗನ್ಮಾತೆಯೆಂದು ಖ್ಯಾತಿವೆತ್ತ ಮಾತೆ ಮಹಾದೇವಿಯವರ ಸುಪ್ರಭಾತವೂ ಬಾರದಿರಲಿಕ್ಕಿಲ್ಲ. ಭಾವುಕರ ಸಂಖ್ಯೆ ಬೆಳೆಯುತ್ತಿರುವಾಗ ಈಗಾಗಲೇ 'ಜವಾಹರ ಅಷ್ಟೋತ್ತರ' ನಿರ್ಮಾಣವಾಗಿದೆ. ಭಾರತದ ಅಚ್ಚುಮೆಚ್ಚಿನ ನಾಯಕಿಯಾದ ಪ್ರಧಾನಿ ಶ್ರೀಮತಿ ಗಾಂಧಿಯವರ, "ಇಂದಿರಾ ಪ್ರಿಯದರ್ಶಿನೀ ತವ ಸುಪ್ರಭಾತಂ" ಮೊಳಗುವ ಸಾಧ್ಯತೆ ಇದೆ. ಒಂದೆರಡು ದಶಕಗಳೊಳಗೆ

ಸುಪ್ರಭಾತಗಳ ಹುಚ್ಚುಹೊಳೆಯೇ ಹರಿಯಬಹುದು. ಪುರಾಣಗಳಲ್ಲಿ ಬಂದಿರುವ ದೇವರುಗಳೆಲ್ಲಾ ಆ ಕಾಲದ ಭಕ್ತರ ಮನಸ್ಸಿನ ದೇವತೆಗಳಾಗಿ ಸ್ಮರಣೆಗೆ ಪಾತ್ರರಾದವರು ಎಂಬುದು ಸತ್ಯ. ಅದೇ ರೀತಿ ಈ ಕಾಲದಲ್ಲಿಯೂ ಜನತೆಯ ಒಲವಿನ ವ್ಯಕ್ತಿಗಳೆಲ್ಲಾ ಮುಂದೆ ದೇವರು ಅಥವಾ ದೇವರ ಅವತಾರ ಪಟ್ಟವನ್ನು ಏರುವುದು ಸಹಜವೇ ಆಗಿದೆ. ಯಾವುದಕ್ಕೂ ಮಿತಿ ಬೇಕು. ಸ್ತುತಿಪಾಠ ಎಲ್ಲೆ ಮೀರಿ ನಡೆದಾಗಲೇ ಅವರೆಲ್ಲಾ ಪುರಾಣಪ್ರಸಿದ್ಧರಾಗುವುದನ್ನು ನಾವು ನೋಡುತ್ತೇವೆ. ಜನತೆ ಅಜ್ಞಾನಾಂಧಕಾರದಲ್ಲಿ ಮುಗ್ಗರಿಸುವುದು ಈ ಅಂಧ ಪರಂಪರೆ ಬೆಳೆದಾಗ—ಎಂಬುದೂ ಪೂರ್ಣ ಸತ್ಯ. ಆದರೆ ಅಂಧಾನುಕರಣೆ ಬೆಳೆಯದಂತೆ, ಜನತೆಯಲ್ಲಿ ಅಜ್ಞಾನ ಆವರಿಸದಂತೆ ಪ್ರಯತ್ನಿಸುವುದು ಜ್ಞಾನಿಗಳ-ವಿಚಾರವಾದಿಗಳ-ತತ್ವನಿಷ್ಠರ ಕರ್ತವ್ಯವಾಗಿದೆ.

ಪೌರಾಣಿಕ ಸಂಪ್ರದಾಯದಲ್ಲಿ ಹಾಸುಹೊಕ್ಕಾಗಿ ಹೆಣೆದುಕೊಂಡಿರುವ ಪದ್ಧತಿಗಳಲ್ಲಿ ಈ 'ಉದಯರಾಗ'ವೂ ಒಂದು. ಇಂದಿನ ಆಧುನಿಕತೆಯ ವರಪುತ್ರರು ಬೆಳಗ್ಗೆ ಎದ್ದೊಡನೆ ಮೋರೆ ತೊಳೆಯದೆ ಕಾಫಿ, ಟೀಗಳನ್ನು ಸೇವಿಸುವ ಹೊಲಸು ರಾಜಕೀಯದ ಡೊಂಬರಾಟದ ಘಟನೆಗಳ ಬಗೆಗೆ ಎಲ್ಲೂ ಇಲ್ಲದ ಕತೂಹಲದಿಂದ ದಿನಪತ್ರಿಕೆಗಳನ್ನು ಪಠಿಸುವ ಪದ್ಧತಿಗಿಂತ ಇದು ಉತ್ತಮವಾದುದು ನಿಜ. ತಮ್ಮ ಪಿತನ ಸ್ಮರಣೆ ಮಾಡುವ ಅವರ ಉದ್ದೇಶದ ಪಾವಿತ್ರ್ಯದ ಬಗ್ಗೆ ಟೀಕೆ ಮಾಡುವ ಉದ್ದೇಶದಿಂದ ಬರೆದ ಲೇಖನವಿದಲ್ಲ. ಬದಲಿಗೆ ಆ ಉದ್ದೇಶದ ಪಾವಿತ್ರ್ಯಕ್ಕೆ ವೈಚಾರಿಕತೆಯ ಹರಿತವನ್ನೂ, ವಸ್ತುನಿಷ್ಠೆಯ ಹೊಳಪನ್ನೂ ಹೊಂದುವಂತೆ ಪ್ರೇರಿಸುವುದಷ್ಟೇ ಈ ಲೇಖನದ ಉದ್ದೇಶ.

ನಿದ್ರೆ-ಜಾಗರಣೆ, ಸುಖ-ದುಃಖ, ಜನ್ಮ-ಮರಣಗಳು ದೇಹಧಾರಿ ಜೀವಾತ್ಮನ ಅಗತ್ಯಗಳೇ ಹೊರತು, ಇವೆಲ್ಲವುಗಳಿಂದ ಮೇಲಿರುವ ವಿಶ್ವಚೇತನ ಪರಮಾತ್ಮನದಲ್ಲ. ನಾವು ಹಾಡುವ ಸುಪ್ರಭಾತ, ಉದಯರಾಗಗಳಿಂದ ಪರಮಾತ್ಮನನ್ನು ಎಬ್ಬಿಸುವಂತೆ ಮಾಡಬೇಕಾದರೆ ಅದಕ್ಕೆ ಮುನ್ನ ಅವನು ಮಲಗಿರುತ್ತಾನೆಂದು ಒಪ್ಪಬೇಕಾಗುತ್ತದೆ. ಮಾತ್ರವಲ್ಲ. ಈ ರೀತಿ ಎಬ್ಬಿಸದಿದ್ದರೆ ಬಹಳ ಹೊತ್ತಿನ ತನಕ ಹಾಗೆಯೇ ಮಲಗಿ ಬಿಡುವನೆಂಬ ಅಥವಾ ಏಳುವುದೇ ಇಲ್ಲವೆಂಬ ಭಯ, ಕಾತುರ ಈ "ಆಸ್ತಿಕ" ಜನರ ಮಸ್ತಿಷ್ಕದಲ್ಲಿರಲೇಬೇಕಷ್ಟೆ! ಈ ರೀತಿಯ ಕಲ್ಪನೆಗೆ ಕಾರಣ, ಪರಮಾತ್ಮನ ಬಗೆಗಿನ ಘೋರ ಅಜ್ಞಾನ ಮಾನವ ಮಾತ್ರರ ಕಲ್ಪನೆಗೂ ನಿಲುಕದ ಈ ವಿಶಾಲ ಬ್ರಹ್ಮಾಂಡದ ಸೃಷ್ಟಿಕರ್ತ ಪಾಲಕ ಹಾಗೂ ಲಯಕರ್ತನಾದ ಆ ಪರಮಾತ್ಮನ ಸ್ವರೂಪದ ಪ್ರಾಥಮಿಕ ಜ್ಞಾನವೂ ಈ ಜನರಿಗಿಲ್ಲದಿದ್ದುದರಿಂದಲೇ [illegible] ಬಾಲಿಶಬುದ್ಧಿಯ ಚೇಷ್ಟೆಗಳು ಎನ್ನುವುದು ಪರಮ ಸತ್ಯ.



ವಾಸ್ತವಿಕ ದೃಷ್ಟಿಕೋನದಿಂದ ಪರಿಶೀಲಿಸಿದಾಗ ಇವರುಗಳು ತಮ್ಮ 'ಪರಮಾತ್ಮ'ನನ್ನು ಉಪಾಸಿಸುತ್ತೇವೆಂದು ಹೊರಟು, ಅವಮಾನಗೊಳಿಸುತ್ತಿದ್ದಾರೆ. ಎಚ್ಚರಿಸಬೇಕಾದುದು ನಿತ್ಯ ಜಾಗ್ರತನಾದ ಪರಮಾತ್ಮನನ್ನಲ್ಲ; ಗಾಢನಿದ್ರೆಯಲ್ಲಿಮುಳುಗಿ ಜೀವನದ ಆನಂದವನ್ನೂ ಶ್ರೇಯಸ್ಸನ್ನೂ ಕಳೆದುಕೊಳ್ಳುತ್ತಿರುವ ಮನುಷ್ಯಪ್ರಾಣಿಗಳನ್ನು; ಅಲ್ಪಜ್ಞರಾದ ಜೀವರನ್ನು—ಎಂಬುದರ ಅರಿವು ಏಕೆ ಇವರಾರಿಗೂ ಆಗುತ್ತಿಲ್ಲ? ಬಹುಶಃ ಇವರ ಬುದ್ಧಿಯೂ, ಆತ್ಮವೂ ಗಾಢನಿದ್ರೆ ಮಾಡುತ್ತಿರುವುದೇ ಕಾರಣವಿರಬೇಕು. ಏನೇ ಇರಲಿ, ನಾವು ಇದನ್ನರಿತ ಮೇಲಾದರೂ ಸ್ವತಃ ಪರಮಾತ್ಮನನ್ನು ಎಬ್ಬಿಸುವ ಹುಚ್ಚು ಹವ್ಯಾಸವನ್ನು ಬಿಟ್ಟು ನಾವು ಎಚ್ಚರವಾಗುವ ಬಗ್ಗೆ ಗಮನ ಹರಿಸೋಣ. ಪ್ರಾತಃಕಾಲ ಬೇಗನೆ ನಿದ್ರೆಯಿಂದೆದ್ದು ಶೌಚಾದಿಗಳಿಂದ ವೃತ್ತರಾಗಿ ಯೋಗಾಸನ, ಪ್ರಾಣಾಯಾಮಾದಿ ವ್ಯಾಯಾಮಗಳನ್ನೂ, ಸಂಧ್ಯಾವಂದನೆ, ಅಗ್ನಿ ಹೋತ್ರಾದಿಗಳನ್ನೂ ಮಾಡಬೇಕು. ಇದಕ್ಕಾಗಿ ನಾವು ಬೇಗನೆ ನಿದ್ರೆ ಬಿಟ್ಟೆದ್ದು ನಮ್ಮ ಕುಟುಂಬದ ಸದಸ್ಯರೆಲ್ಲರನ್ನೂ ಎಬ್ಬಿಸಿ ಮೇಲೆ ಹೇಳಿದ ಸತ್ಕಾರ್ಯಗಳಲ್ಲಿ ತೊಡಗಬೇಕು. ಪ್ರಾತಃಕಾಲವು ಆರೋಗ್ಯವನ್ನೂ, ಐಶ್ವರ್ಯವನ್ನೂತಂದು ಕೊಡುವುದಾದಕಾರಣ ನಾವು ಬೇಗನೆ ಏಳುವವರಾಗೋಣ. ನಮ್ಮ ಆತ್ಮೀಯರೆಲ್ಲರನ್ನೂ ಎಬ್ಬಿಸಿ, ಜೀವನದಲ್ಲಿ ಸುಖವನ್ನು ಕಾಣಲು ಅರ್ಹರಾಗೋಣ.

ಪ್ರಾತಃಕಾಲವು ತನ್ನ ಮಸ್ತಕದಲ್ಲಿ ಸ್ವರ್ಣವನ್ನು ಧರಿಸಿಕೊಂಡು ಆಗಮಿಸುತ್ತದೆ. ಇದರ ಆಗಮನವಾಗುತ್ತಲೇ ಪ್ರಕೃತಿದೇವಿಯು ಮುಗುಳು ನಗೆಯನ್ನು ಸೂಸತೊಡಗುತ್ತಾಳೆ. ಸೂರ್ಯೋದಯದ ಸ್ವಲ್ಪ ಮುನ್ನ ಆಗಸದಲ್ಲಿ ಅರುಣರಾಗ ರಂಜಿತವಾಗುತ್ತವೆ. ಉದಯಸೂರ್ಯ ನಗುತ್ತಿರುವ ಹೂಗಳು, ಹಾಡುವ ಹಕ್ಕಿಗಳು' ಸುಗಂಧವನ್ನು ನಾಲ್ದೆಸೆಗಳಿಗೆ ಚಿಮ್ಮುತ್ತಾ ಮಂದಗತಿಯಿಂದ ಚಲಿಸುವ ಸಮೀರಣ, ಎಲೆಗಳ ಮೇಲೆ ಕುಳಿತಿರುವ ಮಂಜಿನ ಹನಿಗಳಿಂದ ತೂರಿಬಂದ ಸೂರ್ಯಕಿರಣಗಳ ಸಪ್ತವರ್ಣದ ವೈಭವ ಮುಂತಾದ ಚಿತ್ತಾಪಹಾರಕ ದೃಶ್ಯಗಳೂ ಪ್ರತಿದಿನವೂ ನಿತ್ಯ ನೂತನ, ಚಿರಂತನ ಸೌಂದರ್ಯದ ಉಜ್ವಲ ಚೇತೋಹಾರಿಯಾದ ಸನ್ನಿವೇಶ.

ಇಂತಹ ಸುಂದರ ಸನ್ನಿವೇಶದಲ್ಲಿ ಮಾನವನು ಪ್ರಕೃತಿಯ ನಿಕಟ ಸಂಗಾತಿಯಾಗಿ ಅದರ ಮಧುರ ಸ್ನೇಹದ ಲಾಭ ಪಡೆಯುತ್ತಾನೆ ಅವನ ಹೃದಯದಲ್ಲಿ ಪ್ರಕೃತಿದೇವಿಯ ವೈಭವದ ದರ್ಶನದಿಂದ ಉಂಟಾಗುವ ಸಂತಸ ಲಹರಿಗಳೊಂದೆಡೆಯಾದರೆ, ಇನ್ನೊಂದೆಡೆ ಸೃಷ್ಟಿಕರ್ತನ ಅಪಾರ ಕೌಶಲ, ಶಕ್ತಿ' ಪರಿಪೂರ್ಣತೆಗಳನ್ನು ಹೃದ್ಗತ ಮಾಡಿಕೊಳ್ಳುತ್ತಾನೆ. ಹಾಗೂ ಅದರಿಂದ ಮತ್ತಷ್ಟು ಆನಂದದ ಅನುಭೂತಿಯನ್ನು ಮಾಡಿಕೊಳ್ಳುತ್ತಾನೆ.

ಪ್ರತಿನಿತ್ಯ ಪ್ರಾತಃಕಾಲವಾಗುವುದು; ಸೂರ್ಯನ ಉದಯಾದಿಗಳು ಪರಮಾತ್ಮನ ನಿಯಮ ಅಚಲವಾದುದು —ಎಂಬುದರ ಶಿಕ್ಷಣವನ್ನು ಮಾನವನಿಗೆ ಪ್ರಕೃತಿದೇವಿಯು ನೀಡುತ್ತಾಳೆ.

ಪ್ರತಿಯೊಂದು ಪ್ರಾತಃಕಾಲವೂ ಬರುವಾಗ ತನ್ನೊಂದಿಗೆ ನವನವೀನ ಆಶೆಗಳನ್ನೂ, ಸ್ಫೂರ್ತಿಯನ್ನೂ, ಕರ್ತವ್ಯಗಳನ್ನೂ, ಚಿಂತನೆಗಳನ್ನೂ ಹಾಗೂ ಆನಂದವನ್ನು ಹೊತ್ತು ತರುತ್ತದೆ.

ಈ ಪುಣ್ಯಕಾಲದಲ್ಲಿಯೇ ಸರ್ವಜ್ಞನೂ, ಸಚ್ಚಿದಾನಂದ ಸ್ವರೂಪನೂ ಆದ ಭಗವಂತನಲ್ಲಿ ಹಾರ್ದಿಕವಾಗಿ ಪ್ರಾರ್ಥನೆ ಸಲ್ಲಿಸಬೇಕು. ಆಗ ಮಾತ್ರ ನಮ್ಮ ಕಲ್ಯಾಣವಾಗುವುದು ನಿಶ್ಚಿತ. ಎಲ್ಲಾ ದುರ್ವ್ಯಸನಗಳಿಂದಲೂ ವಿಮುಕ್ತಿ ಪಡೆಯಲು ಬೇಕಾದ ಶಕ್ತಿಯನ್ನು ಆ ಅನಂತ ಶಕ್ತಿ ಸಾಮರ್ಥ್ಯಗಳ ಭಂಡಾರನಾದ ಪರಮಾತ್ಮನಲ್ಲಿ ಬೇಡುವ ಮೂಲಕ ಮತ್ತು ಆಸಕ್ತಿಯನ್ನು ತನ್ನಲ್ಲಿ ಧಾರಣೆ ಮಾಡಿಕೊಳ್ಳುವುದರ ಮೂಲಕ ಪರಮಾತ್ಮನ ಸ್ವರೂಪದ ಅರಿವಾಗಿ, ಆತ್ಮಾನಂದದ ಅನುಭವವಾಗುತ್ತದೆ.

ಋಗ್ವೇದದಲ್ಲಿ ಬರುವ ಪ್ರಾತಃಸೂಕ್ತದ ಈ ಕೆಳಗಿನ ಮಂತ್ರಗಳನ್ನು ಪ್ರತಿಯೋರ್ವನೂ ಜಪಿಸುತ್ತಾ ಕಾರ್ಯಪ್ರವೃತ್ತನಾಗುವುದು ಸೂಕ್ತವಾಗಿದೆ.

### ಪ್ರಾತಃ ಸೂಕ್ತಗಳು

ಓಂ ಪ್ರಾತರಗ್ನಿಂ ಪ್ರಾತರಿಂದ್ರಂ ಹವಾಮಹೇ ಪ್ರಾತರ್ಮಿತ್ರಾವರುಣಾ ಪ್ರಾತರಶ್ವಿನಾ। ಪ್ರಾತರ್ಭಗಂ ಪೂಷಣಂ ಬ್ರಹ್ಮಣಸ್ಪತಿಂ ಪ್ರಾತಃ ಸೋಮಮುತರುದ್ರಂ ಹುವೇಮ ॥

[ಋಗ್ವೇದ: ೭-೪೧-೧]

ಓಂ ಪ್ರಾತರ್ಜಿತಂ ಭಗಮುಗ್ರಂ ಹವಾಮಹೇ ವಯಂ ಪುತ್ರಮದಿತೇರ್ಯೋ ವಿಧರ್ತಾ। ಆಧ್ರಶ್ಚಿದ್ ಯಂ ಮನ್ಯಮಾನಸ್ತುರಶ್ಚಿದ್ ರಾಜಾಚಿದ್ ಯಂ ಭಗಂ ಭಕ್ಷೀತ್ಯಾಹ ॥

[ಋಗ್ವೇದ :೭-೪೧-೨]

ಓಂ ಭಗ ಪ್ರಣೇತರ್ಭಗ ಸತ್ಯರಾಧೋ ಭಗೇಮಾಂ ಧಿಯ ಮುದವಾದದನ್ನಃ। ಭಗೋ ಪ್ರಣೋಜನಯ ಗೋಭೀರಶ್ವೈರ್ಭಗ ಪ್ರ ನೃಭ್ಬಿರ್ನೃವಂತಃ ಸ್ಯಾಮ ॥

[ಋಗ್ವೇದ : ೭-೪೧-೩]

ಓಂ ಉತೇದಾನೀಂ ಭಗವಂತಃ ಸ್ಯಾಮೋತ ಪ್ರಪಿತ್ವ ಉತಮಧ್ಯೇ ಅಹ್ನಾಮ್। ಉತೋದಿತಾ ಮಘವನ್ ಸೂರ್ಯಸ್ಯವಯಂ ದೇವಾನಾಂ ಸುಮತೌ ಸ್ಯಾಮ ॥

[ಋಗ್ವೇದ : ೭-೪೧-೪]

ಓಂ ಭಗ ಏವ ಭಗವಾನ್ ಅಸ್ತು ದೇವಾಸ್ತೇನ ವಯಂ ಭಗವಂತಃ ಸ್ಯಾಮ। ತಂ ತ್ವಾ ಭಗ ಸರ್ವ ಇಜ್ಜೋಹವೀತಿ ಸ ನೋ ಭಗ ಪುರ ಏತಾ ಭವೇಹ ॥

[ಋಗ್ವೇದ : ೭-೪೧-೫]



ಓಂ ಶಾಂತಿಃ ಶಾಂತಿಃ ಶಾಂತಿಃ

ಈ ರೀತಿ ಮಾನವನು ಪ್ರತಿನಿತ್ಯ ಪಾತ್ರಃಸೂಕ್ತಗಳನ್ನು ಜಪಿಸಿ, ಅದರ ಅರ್ಥವನ್ನು ಮನನ ಮಾಡಿ, ತನ್ನ ಅನುದಿನದ ಕಾರ್ಯಗಳಲ್ಲಿ ಧರ್ಮಾನುಸಾರ ತೊಡಗಬೇಕು. ದಿನವಿಡೀ ಬಳಲಿದ ಆತ್ಮನಿಗೆ ವಿಶ್ರಾಂತಿಯ ಆವಶ್ಯಕತೆಯಿದೆ. ಅದಕ್ಕಾಗಿ ರಾತ್ರಿಯನ್ನು ನಿರ್ಮಿಸಿದ ಪರಮಪಿತನಾದ ಪರಮಾತ್ಮನನ್ನು ಶಯ್ಯಾಸೀನರಾಗುವ ಪೂರ್ವ, ಮನಸ್ಸಿನ ಶಾಂತತೆಗಾಗಿ ಜಪಿಸುವ ಶಿವಸಂಕಲ್ಪ ಸೂಕ್ತದ ಮಂತ್ರಗಳನ್ನು ಅರ್ಥಸಹಿತವಾಗಿ ದಿನವಿಡೀ ಸ್ತೋತ್ರಮಾಡಿ ಎಚ್ಚರಗೊಳ್ಳುವ ಪ್ರತಿ ಪ್ರಭಾತವೂ ಸುಪ್ರಭಾತವಾಗುವುದರಲ್ಲಿ ಸಂಶಯವಿಲ್ಲ.

(ಕೃಪೆ : ವೇದಪ್ರಕಾಶ : ವೈಶಾಖ–ಮೇ–೧೯೮೦)

---

## ಪು ನ ರಾ ವ ರ್ತ ನೆ

—ಬಿ. ಸಿದ್ದಲಿಂಗಪ್ಪ

ಜನ್ಮ ಭೂಮಿಯತಿಶಯ ಭಾಗ್ಯದಿಂದೊರತು
ನಮ್ಮೆಚ್ಚಿಗನುವಾಗಿ ಜನಿಸುವನೆ ಯುಗಪುರುಷ !
ಬಾಳ ಜಂಜಾಟದಲಿ, ಪಾಪತಾಪದಲಿ
ಬೇಯ್ವಮನತಣಿಪ ಪರಮ ಪುರುಷ !
ಎಲ್ಲರಂತಯೆ ಹುಟ್ಟಿ, ಎಲ್ಲರಂತೆಯೆ ಬೆಳೆದು
ಎಲ್ಲರಲು ಎಲ್ಲರಿಗತಿಶಯವಾಗಿ ಬೆರೆತು
ಎಲ್ಲೆಲ್ಲಿಯೂ ಸಲ್ಲುವ ಬಲ್ಲಿದನವನಾಗಿ
ಬಯಲಲ್ಲಿ ಬಯಲಾಗುವ ದಿವ್ಯಪುರುಷ !
ಹಿಂದೆ ಕಲ್ಯಾಣದಲಿ ನಿಂದಿದ್ದ ಬಸವಣ್ಣ.
ಬೆಂದ ಮನಸ್ಥರಿಸಿದ್ದ ಕಾರುಣ್ಯ ಹೊಳೆಯನ್ನ
ಸ್ವಚ್ಛಂದ ಜೀವನಕೆ ಕಲಿಸಿ ಕಾಯಕವನ್ನ
ಸಂದ ಹಣದಿಂದ ನಡೆಸೆಂದ ದಾಸೋಹವನ್ನ !
ಅಂದು ಕಲ್ಯಾಣವದಾಗಿತ್ತು ಭಕ್ತಿಯಾ ನೆಲೆವೀಡು
ಸತ್ಯ ಶುದ್ಧ ಕಾಯಕದ ವಚನಕಾರರ ಜೇನ್ಗೂಡು
ಬೆಳಗಿತದು ಭಕ್ತಿ–ಜ್ಞಾನ–ದಾಸೋಹದ ಬಸವಜ್ಯೋತಿ
ಪಸರಿಸಿತು ದಿಸೆದಿಸೆಗೂ ಸರ್ವಸಮನ್ವಯ ನೀತಿ !
ಕಲಿಕಾಲದಿದು ಸಿದ್ಧಗಂಗೆಯೂ ಕಲ್ಯಾಣ ಪಟ್ಟಣ
ಕಾಯಕದ ಪ್ರತಿಮೂರ್ತಿ ಶಿವಕುಮಾರರು ನಿಂತ ತಾಣ
ತಂದರಂದು ಕಿಡಿಗೇಡಿಗಳು ಕಲ್ಯಾಣ ಕವನತಿ
ಇಂದಾದರೂ ಬಯಸುವಾ ಬರಲೆಮಗೆ ಸನ್ಮತಿ !

# ಭರವಸೆ ನೀಡುವುದಲ್ಲ

# ಭರವಸೆ ಮೂಡಿಸುವ ಸರ್ಕಾರ

ಶ್ರೀ ಆರ್. ಗುಂಡೂರಾವ್ ಅವರ ನೇತೃತ್ವದ ಕರ್ನಾಟಕ ಸರ್ಕಾರ ಅಧಿಕಾರ ವಹಿಸಿಕೊಂಡು ಇದೀಗ ಒಂದು ವರ್ಷ ಸಂದಿದೆ. ಅದರ ಸಮರ್ಥತೆಯನ್ನು ಅಳೆಯಲು, ಫಲಿತಾಂಶವನ್ನು ನಿರೀಕ್ಷಿಸಲು ಇದು ತೀರಾ ಅಲ್ಪಕಾಲ. ಆದರೂ ಈ ಅಲ್ಪಾವಧಿಯಲ್ಲೇ ಅದರ ಸಾಧನೆ ಕಣ್ಣು ಕುಕ್ಕಿಸುವಂತಹದು. ಯಾವುದೇ ಉದ್ಯಮದ ತಿರುಳು ಅದಕ್ಕಾಗಿ ನಡೆಯುವ ಪ್ರಯತ್ನದಲ್ಲಿ ಕಂಡು ಬರುವುದೇ ವಿನಃ, ಅದು ನೀಡುವ ಭರವಸೆಗಳಲ್ಲಿ ಅಲ್ಲ.

**ಸರ್ಕಾರದ ಮಂಜೂರಾತಿ :—** ಅನುಮತಿ ನೀಡುವ ವಿಷಯಗಳಲ್ಲಿ ವಿಧಾನವನ್ನು ಸರಳಗೊಳಿಸಿ ಕೆಲಸ ಕಾರ್ಯಗಳು ತ್ವರಿತಗತಿಯಿಂದ ಮುಂದೆ ಸಾಗುವಂತೆ ಮಾಡಿದ್ದು ಈ ಸರ್ಕಾರದ ಪ್ರಮುಖ ಸಾಧನೆ. ಬ್ರಷ್ಟಾಚಾರದ ರೆಕ್ಕೆ ಪುಕ್ಕಗಳನ್ನು ಕತ್ತರಿಸಿ ಹಾಕಿ ಅವ್ಯವಹಾರದ ಎಲ್ಲ ಮೂಲಗಳನ್ನೂ ತನಿಖೆಗೆ ಒಳಪಡಿಸಿ ಆಡಳಿತದಲ್ಲಿ ಶುಚಿತ್ವವನ್ನು ತಂದುದು ಇನ್ನೊಂದು ಮಹತ್ ಸಾಧನೆ.

**1980 :—** ಕರ್ನಾಟಕದಲ್ಲಿ ರೈತರ ಬಗ್ಗೆ ವಿಶೇಷ ಗಮನ ಹರಿದ ವರ್ಷ-ವ್ಯವಸಾಯ ಸೂಕ್ತ ಸ್ಥಾನಮಾನ ಪಡೆದ ವರ್ಷ. ರೈತರ ಕುಂದುಕೊರತೆಗಳನ್ನು ಅಭ್ಯಸಿಸಿ ಅವರ ಶ್ರಮಕ್ಕೆ ತಕ್ಕ ಪ್ರತಿಫಲ ದೊರೆಯುವಂತೆ ಕ್ರಮ ಸೂಚಿಸಲು ಸರ್ಕಾರ ಒಂದು ವಿಶೇಷ ಸಮಿತಿಯನ್ನು ನೇಮಿಸಿತು. ರೈತರಿಗೆ ನೇರ ಪರಿಹಾರ ನೀಡುವುದರ ಜೊತೆಗೆ ನೀರಾವರಿ ಸೌಲಭ್ಯ, ಬೀಜ-ಗೊಬ್ಬರ ಮುಂತಾದ ರೂಪದಲ್ಲಿ ಅಪ್ರತ್ಯಕ್ಷ ಪರಿಹಾರವನ್ನೂ ನೀಡಿತು.

## ಸರ್ಕಾರ ನೀಡಿದ ಹೊಸ ಕೊಡುಗೆ

**ನೀರಾವರಿ ತೆರಿಗೆಯಲ್ಲಿ ಇಳಿತಾಯ :—** ಹನ್ನೊಂದು ತಿಂಗಳ ಕಬ್ಬಿನ ಬೆಳೆಗೆ ನೀರಾವರಿ ತೆರಿಗೆಯನ್ನು ಎಕರೆಗೆ 200ರೂ ಯಿಂದ 150ರೂ ಗೆ ಇಳಿಸಲಾಗಿದೆ. 11-18 ತಿಂಗಳ ಬೆಳೆಗೆ ಈಗ ರೈತ ಕೊಡಬೇಕಾದುದು 300 ರೂ ಅಲ್ಲ. ಕೇವಲ 225 ರೂ.





ಇತರ ಬೆಳೆಗಳಿಗೆ ಅವನು, ಕೊಡಬೇಕಾದುದರ ಮತ್ತಷ್ಟು ಕಡಿಮೆ ಭತ್ತ-ಮಲೆನಾಡಿನಲ್ಲಿ 32 ರೂ. ಇತರೆಡೆ 48 ರೂ. ಗೋಧಿ-24 ರೂ. ಜೋಳ-24 ಹತ್ತಿ-48 ರೂ.

* ಸಹಕಾರಿ ಸಂಘಗಳಿಂದ ಪಡೆದ ಸಾಲ ಮನ್ನಾ ಸೌಕರ್ಯ ಹೆಚ್ಚಿಚ್ಚು ರೈತರಿಗೆ ದೊರೆಯುವಂತೆ ನಿರ್ದೇಶನ ಮಾರ್ಪಾಡು.

* ನೀರಾವರಿ ಪಂಪ್‌ಸೆಟ್ಟುಗಳಿಗೆ ವಿದ್ಯುತ್ ದರವನ್ನು ಪ್ರತಿ ಅಶ್ವಶಕ್ತಿಗೆ 50-ರೂ. ನಂತೆ ನೀಡುವ ಸೌಲಭ್ಯವನ್ನು ಈಗ 10 ಅಶ್ವಶಕ್ತಿ ವರೆಗಿನ ಪಂಪ್-ಸೆಟ್ಟುಗಳಿಗೂ ವಿಸ್ತರಿಸಲಾಗಿದೆ. ಇದುವರೆಗೆ 5 ಅಶ್ವಶಕ್ತಿ ಪಂಪುಗಳಿಗೆ ಮಾತ್ರ ಈ ರಿಯಾಯಿತಿ ಇತ್ತು.

* ಸಾಲ ಮರುಪಾವತಿ ಮನ್ನಾ ಅಥವಾ ಮುಂದೂಡಿಕೆಯಿಂದ ಸಹಕಾರ ಸಂಘಗಳಿಗೆ ಆಗುವ ತೊಂದರೆಯನ್ನು ಪರಿಹರಿಸಲು 380 ಲಕ್ಷ ರೂ. ಗಳ ನೀಡಿಕೆ ಪ್ರತಿ ಜಿಲ್ಲಾ ಸಹಕಾರಿ ಬ್ಯಾಂಕ್ 20 ಲಕ್ಷ ರೂ. ಗಳನ್ನು ಪಡೆದು ಸಾಲಗಳನ್ನು ಮನ್ನಾ ಮಾಡಿದ ಅಥವಾ ಮರುಪಾವತಿ ಮುಂದೂಡಿದ ಸಂದರ್ಭಗಳಲ್ಲಿ ಈ ಹಣ ಬಳಸಬಹುದು.

* ಹಿಂದುಳಿದ ಪ್ರದೇಶಗಳಲ್ಲಿ ಹರಿಜನ-ಗಿರಿಜನ ವಿದ್ಯಾರ್ಥಿಗಳಿಗಾಗಿ ಶಾಲಾ-ಕೊಠಡಿಗಳ ನಿರ್ಮಾಣಕ್ಕಾಗಿ ಬರುವ ಮಾರ್ಚ್ ಒಳಗಾಗಿ 1 ಕೋಟಿ ರೂ. ವೆಚ್ಚ.

* ರಾಜ್ಯದಲ್ಲಿರುವ 15,000 ಸ್ಟೈಪೆಂಡರಿ ಪದವೀಧರರ ವೇತನವನ್ನು ತಿಂಗಳಿಗೆ 150 ರಿಂದ 200 ರೂ.ಗೆ ಏರಿಸಲಾಗುವುದು. ಪದವೀಧರರು ಸ್ವಂತ ಉದ್ಯೋಗ ಕೈಕೊಳ್ಳಲು ಬ್ಯಾಂಕ್ ಸಾಲ ಹಾಗೂ ಮೂಲಧನ ನೀಡಲಾಗುವುದು.

* ನಿರುದ್ಯೋಗಿ ಹರಿಜನ-ಗಿರಿಜನ ಯುವಕರಿಗೆ ಆಟೋ ಹಾಗೂ ಮೋಟಾರ್ ಡ್ರೈವಿಂಗ್ ತರಬೇತಿ ನೀಡಲು 25,000 ರೂ. ಮಂಜೂರಿ, ತರಬೇತಿಯ ನಂತರ ಸ್ವಂತ ವಾಹನ ಕೊಳ್ಳಲು ಬ್ಯಾಂಕ್ ಅಥವಾ ಹರಿಜನ-ಗಿರಿಜನ ಕಾರ್ಪೊರೇಷನ್ ಮುಖಾಂತರ ಸಾಲದ ನೆರವು.

• ಹರಿಜನ-ಗಿರಿಜನ ವಸತಿಗಳಲ್ಲಿ ಹಾಗೂ ಬರಗಾಲಿ ಪೀಡಿತ ಪ್ರದೇಶಗಳಲ್ಲಿ ಕುಡಿಯುವ ನೀರಿನ ಬಾವಿಗಳನ್ನು ತೋಡಿಸಲು ಒಂದು ಕೋಟಿ ರೂ. ಮಂಜೂರು, ಬರುವ ಜೂನ್ ಒಳಗಾಗಿ ಕೆಲಸ ಮುಗಿಸಲು ಆದೇಶ.

• ಅಭಾವ ಪೀಡಿತ ಪ್ರದೇಶಗಳಲ್ಲಿ ಪರಿಹಾರ ಕಾಮಗಾರಿಗಳಿಗಾಗಿ ಸುಮಾರು 6 ಕೋಟಿ ರೂ. ಬಿಡುಗಡೆ. ರಾಜ್ಯದಲ್ಲಿ-ಬರಗಾಲ ಪರಿಹಾರಕ್ಕೆ 255 ಕೋಟಿ ರೂ. ಗಳ ಸಹಾಯ ನೀಡುವಂತೆ ಕೇಂದ್ರ ಸರಕಾರಕ್ಕೆ ಮನವಿ.

* ಈ ಪ್ರದೇಶಗಳಲ್ಲಿ ಶಾಶ್ವತ ಪರಿಹಾರಕ್ಕೆ ಕ್ರಮ ಸೂಚಿಸಲು ಉನ್ನತಾಧಿಕಾರ ಸಮಿತಿ ರಚನೆ.

* ಆಸ್ಪತ್ರೆಗಳಲ್ಲಿ ಹೊರ-ರೋಗಿಗಳ ತಪಾಸಣೆಗಾಗಿ ವಿಧಿಸುತ್ತಿದ್ದ 25 ಪೈಸೆ ಶುಲ್ಕ ರದ್ದು.

* ಜನತಾ ಮನೆಗಳಿಗೆ ನೀಡುತ್ತಿದ್ದ ಸಹಾಯಧನ 1500 ರೂ. ಗಳಿಂದ 2000 ರೂ. ಗೆ ಹೆಚ್ಚಿಸಲಾಗಿದೆ.

* ಪ್ರತಿ ಜಿಲ್ಲೆಗೂ ಒಂದು ಕ್ರೀಡಾಗಾರ ನಿರ್ಮಾಣ- ಒಳಾಂಗಣ ಹಾಗೂ ಹೊರಾಂಗಣ ಕ್ರೀಡೆಗಳಿಗೂ ಅವಕಾಶವಿರುವ ಮತ್ತು ಈಜುಕೊಳವನ್ನೂ ಒಳಗೊಂಡಂತೆ ಕ್ರೀಡಾಗಾರಗಳ ವ್ಯವಸ್ಥೆ. ಪ್ರತಿ ತಾಲೂಕಿಗೊಂದು ವ್ಯಾಯಾಮ ಶಾಲೆ.

* ಕರ್ನಾಟಕದಲ್ಲಿ ತಯಾರಾದ ಕನ್ನಡ, ತುಳು, ಕೊಂಕಣಿ ಮತ್ತು ಕೊಡವ ಭಾಷಾ ಚಲನಚಿತ್ರಗಳಿಗೆ ಸಹಾಯಧನ, ಬಣ್ಣದ ಚಿತ್ರಕ್ಕೆ 1.50 ಲಕ್ಷ ರೂ. ಕಪ್ಪು ಬಿಳುಪು ಚಿತ್ರಕ್ಕೆ 1 ಲಕ್ಷ ರೂ. ಕಳೆದ ವರ್ಷ ಇದಕ್ಕಾಗಿ 60 ಲಕ್ಷ ರೂ. ವೆಚ್ಚ ಮಾಡಲಾಗಿದೆ. ಈ ವರ್ಷ 65 ಲಕ್ಷ ರೂ. ನೀಡುವ ಗುರಿ.

**ಜನತೆಯ ಅಗತ್ಯಗಳನ್ನು ಪೂರೈಸಲು ಕಂಕಣ ಬದ್ಧವಾದ ಯುವ ಸರ್ಕಾರ—ಕರ್ನಾಟಕ ಸರ್ಕಾರ.**

ಪ್ರಕಟಣೆ :— "ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ"





# ವಿಜಯನಗರದ ರಾಯರಕಾಲದಲ್ಲಿದ್ದ ಶಿಕ್ಷಣದ ರೀತಿನೀತಿಗಳು.

—ಶ್ರೀ ಎಸ್. ವಿ. ಜೇವೂರ

ಆಗಿನ ಕಾಲದಲ್ಲಿ ಕರ್ನಾಟಕದೊಳಗಿನ ಕುರುಬರು ಬಹಳ ಸಂಸ್ಕೃತಿ ಸಂಪನ್ನರಾಗಿದ್ದರೆಂದು ಹೇಳಬಹುದು. ಅವರೂಕೂಡ ಪುಸ್ತಕಗಳನ್ನು ಬರೆಯಬಲ್ಲವರಾಗಿದ್ದರು.[10] ಅಲ್ಲದೆ ಅವರದು ಶಕ್ತಿ ಸಂಪನ್ನವಾದ ಸಮಾಜವೆಂದೆನಿಸಿಕೊಂಡಿತ್ತು. "ಒಬ್ಬ ಸನ್ಯಾಸಿಯು ಕುರುಬರಿಂದ ಬರೆಯಲ್ಪಟ್ಟ ಒಂದು ಗ್ರಂಥವನ್ನು ಅವಲೋಕಿಸಿ ಅದು ಮಹತ್ವದ್ದಾಗಿತ್ತೆಂದೂ, ಇನ್ನೂ ಅಂಥ ಗ್ರಂಥಗಳು ಲಭ್ಯವಾಗಿರುವುದೆಂದೂ" ಅಭಿಪ್ರಾಯ ವ್ಯಕ್ತಪಡಿಸಿದ್ದಾನೆ. ಅವರು (ಕುರುಬರು) ಕೃಷ್ಣದೇವರಾಯನ ಕಾಲದಲ್ಲಿ ಅನೇಕ ಅಧಿಕಾರ ಸ್ಥಾನಗಳಿಗೆ ಏರಿದ್ದರೆಂದು ತಿಳಿದುಬರುವುದು.[11] ಕರ್ನಾಟಕದೊಳಗಿನ ಸಾಹಸಿಗಳಾದ ವೀರಬಣಂಜುಗಳು ಐಹೊಳೆ ಎಂಬ ತಮ್ಮ ಕೇಂದ್ರ ಸ್ಥಾನದಲ್ಲಿ ೫೦೦ ಸದಸ್ಯರನ್ನುಳ್ಳ ಸಂಸ್ಥೆಯನ್ನು ಕಟ್ಟಿಕೊಂಡು ಸಾಮಾಜಿಕ ಆರ್ಥಿಕ ಪ್ರಗತಿಗಾಗಿ ದುಡಿಯುತ್ತಿದ್ದ ಮಹತ್ವದ ಗುಂಪಾಗಿತ್ತೆಂದು ಬಾರ್ನಟ್ ಅವರು ಅಭಿಪ್ರಾಯ ಪಟ್ಟಿದ್ದಾರೆ.[12] ಪ್ರಾಚೀನ ದಕ್ಷಿಣಭಾರತದ ವ್ಯಾಪಾರೀ ಜನಾಂಗದಲ್ಲಿ "ಅಯ್ಯಾ ವೊಳೆ ಐನೂರ್ವರ್" ಎಂಬ ಹೆಸರು ಅನೇಕ ಶಾಸನಗಳಲ್ಲಿ ಉಕ್ತವಾಗಿದೆ. ಈ ವ್ಯಾಪಾರೀ ಸಂಘದವರು ತಮ್ಮ ಕೇಂದ್ರ ಕಛೇರಿಯನ್ನು ಐಹೊಳೆಯಲ್ಲಿ ಸ್ಥಾಪಿಸಿ ಸಮಸ್ತ ಭಾರತದಲ್ಲಿಯೇ ವ್ಯಾಪಾರ ಸಂಬಂಧವನ್ನಿಟ್ಟುಕೊಂಡಿದ್ದರು. ಸಾಮಾನ್ಯವಾಗಿ ಎಲ್ಲ ವರ್ತಕರ ಗುಂಪುಗಳು ತಮ್ಮನ್ನು "ಐಯ್ಯಾವೊಳೆ" ಐನೂರ್ವರು ಮೂಲ

10 ಸಂಗಮನ ೫ ಜನ ಮಕ್ಕಳೂ ಕುರುಬರೆಂದು ಹೇಳುವ ಪ್ರವಾದವೊಂದಿದೆ.

11 ಸೋ. ಅಂಡ್, ಸೋ. ಲೈಫ್. ಇನ್. ದಿ. ವಿಜಯನಗರ ಎ. II P.42

12 ಈ ಅಯ್ಯಾವೊಳೆ ಅಥವಾ ಈಗಿನ ಐಹೊಳೆ ವಿಜಾಪುರ ಜಿಲ್ಲೆಯ ಬಾದಾಮಿಯ ಸಮೀಪದ ಒಂದುಹಳ್ಳಿ. ಶಾಸನಗಳಲ್ಲಿ "ಅಯ್ಯಾವೊಳೆ" ಎಂದೇ ಇದರ ರೂಪವಿದೆ. ಕೆಲವುಕಡೆ ಇದನ್ನು ಆರ್ಯಪುರ ಎಂದೂ ಸಂಸ್ಕೃತೀಕರಣ ಮಾಡಿರುವುದು ಕಂಡುಬರುವುದು. ಅಯ್ಯಾವೊಳೆ ರೂಪವೂ ಕ್ರಿ.ಶ. 1100ರ ಶಾಸನದಲ್ಲಿದೆ.
—(ಡಾ|| ಎಂ. ಚಿದಾನಂದಮೂರ್ತಿ. ಕ.ಶಾ.ಸಾಂ. ಪುಟ 382, ಅಡಿಟಿಪ್ಪಣಿ)

ಪುರುಷರೆಂದು ಹೇಳಿಕೊಳ್ಳುತ್ತಿದ್ದರು. ಇವರ ಹೆಚ್ಚುಗಳವನ್ನು ಕೊಂಡಾಡುವ ಅನೇಕ[13] ಶಾಸನಗಳು ಉಪಲಬ್ಧವಾಗಿವೆ. ಇವರು ಸ್ವಯಂ ಶೂರರಾಗಿದ್ದರು. ಅಲ್ಲದೆ ಇವರು ತಮ್ಮ ವ್ಯಾಪಾರ ಪರ್ಯಟನದ ರಕ್ಷೆಗೆಂದು ಸೈನ್ಯವನ್ನೂ ಕೂಡ ಇಟ್ಟುಕೊಂಡಿದ್ದರು. ಇವರು ಪ್ರಾಚೀನ ಪರಂಪರೆಯಿಂದ ಬಂದ ವಂಶಸ್ಥರು. ಆಗಿನಕಾಲದ ಕರ್ನಾಟಕದ ವ್ಯಾಪಾರದಷ್ಟೇ ಅಲ್ಲ ಭಾರತದ ವ್ಯಾಪಾರದಮೇಲೆಯೇ ಇವರ ಹಿಡಿತವಿತ್ತು. ಹೀಗಾಗಿ ಇವರು ಪ್ರಸಿದ್ಧ ಐಶ್ವರ್ಯವಂತ ಜನಾಂಗವೆನಿಸಿದ್ದರು. ಅನೇಕ ರಾಜರೂಕೂಡ ಇವರ ಸ್ನೇಹಿತರಾಗಿದ್ದರು. ರಾಜರುಗಳಿಗೆ ಬೇಕಾಗುವ ಅಮೂಲ್ಯವಸ್ತುಗಳನ್ನು ಇವರು ಪುರವಠಿಮಾಡುತ್ತಿದ್ದರು. ರಾಜ್ಯದ ಅಭ್ಯುದಯಕ್ಕೆ ಇವರು ನೆರವಾಗಿದ್ದರು. ರಾಜರೂಕೂಡ ಇವರನ್ನು ರಾಜ್ಯದ ಮೂಲ ಸ್ತಂಭವೆಂದು ತಿಳಿಯುತ್ತಿದ್ದರು.[14] ಈ ವೀರ ಬಣಜುಗಳ ದಾನದ ವಿಷಯದಲ್ಲಿ ಅನೇಕ ಶಾಸನಗಳು ಮುಕ್ತ ಕಂಠದಿಂದ ಹೊಗಳುತ್ತವೆ. ಕನ್ನಡ ನಾಡನಲ್ಲಿ ಇವರು ಅನೇಕ ದೇವಾಲಯಗಳನ್ನು ಕಟ್ಟಿದ್ದಾರೆ. ದತ್ತಿಗಳನ್ನು ಬಿಟ್ಟಿದ್ದಾರೆ. ಈ ಮೂಲಕ ಕರ್ನಾಟಕದ ಶಿಕ್ಷಣ ಕ್ಷೇತ್ರಕ್ಕೆ ಇವರ ಸೇವೆ ಅಪಾರವಾದುದಾಗಿದೆ. ಕ್ರಿ. ಶ.೧೧೫೦ರ ಒಂದು ಶಾಸನದಲ್ಲಿ "....ಅವರು ರಾಜಭಂಡಾಗಾರವನ್ನು ಸುವರ್ಣದಿಂದ ತುಂಬುತ್ತಿದ್ದರು. ಅಲ್ಲದೆ ಉಳಿದ ಸಂಪತ್ತಿನಲ್ಲಿ ಪಂಡಿತರಿಗೂ ದಾನಾದಿಗಳನ್ನು ಕೊಡುತ್ತಿದ್ದರೆಂದು ಹೇಳಿದೆ. ಅಲ್ಲದೆ ಇವರು ಚತುಸ್ಸಮಯ ಷಡ್ದರ್ಶನಗಳಲ್ಲಿ ಪಾರಂಗತರಾಗಿ ಮೆರೆಯುತ್ತಿದ್ದರೆಂದು ವರ್ಣಿಸಲಾಗಿದೆ"[15] "ಈ ಸಂಘಗಳು ನ್ಯಾಯಾಲಯದ ಕೆಲಸಕಾರ್ಯಗಳನ್ನು ಮಾಡುತ್ತಿದ್ದವು.[16] ಕರ್ನಾಟಕದ ಈ ವೀರ ಬಣಂಜು ಸಂಘದವರು ಭಾರತದಲ್ಲಿ ಮಾತ್ರವೇ ಅಲ್ಲ ಹೊರದೇಶಗಳೊಡನೆಯೂ ವ್ಯಾಪಾರ ಸಂಪರ್ಕವನ್ನಿಟ್ಟುಕೊಂಡು ಅಪಾರ ಸುವರ್ಣವನ್ನು ಭಾರತಕ್ಕೆ ಸುರಿಸುತ್ತಿದ್ದರು. ಕ್ರಿ ಶ. ೧೪ರಲ್ಲಿ ಮಡಿದ ರೋಮನ್ ಚಕ್ರವರ್ತಿ "ಆಗಸ್ಟಸ"ನ ಕೆಲವು ನಾಣ್ಯಗಳೂ ಚಿತ್ರದುರ್ಗ ಜಿಲ್ಲೆಯಲ್ಲಿ ದೊರಕಿವೆ.[17] ಅಂದರೆ ಇವರು (ಕರ್ನಾಟಕದ ಈ ವೀರಬಣಂಜುಗಳು ಚೀನ, ಗ್ರೀಸ್, ರೋಮ್ ಚಕ್ರಾಧಿಪತ್ಯಗಳೊಡನೆ ವ್ಯಾಪಾರ ಸಂಪರ್ಕವನ್ನಿಟ್ಟುಕೊಂಡಿದ್ದರೆಂದು ತಿಳಿದುಬರುವುದು. ಈ ಎಲ್ಲಾ ವಿಷಯಗಳನ್ನು ಪರ್ಯಾಲೋಚಿಸಿದರೆ ಈ ಸಂಘದವರ ವರ್ಚಸ್ಸು ಕರ್ನಾಟಕದ ಘನತೆ ಗೌರವಗಳನ್ನು ಹೆಚ್ಚಿಸುತ್ತದೆಂಬುದರಲ್ಲಿ ಸಂದೇಹವೇ ಇಲ್ಲ. ಇಂಥ ಸುಸಂಸ್ಕೃತ ವ್ಯಾಪಾರೀ ಜನಾಂಗವನ್ನುಳ್ಳ ಕರ್ನಾಟಕದ ಆಗಿನ ಶಿಕ್ಷಣದಲ್ಲಿ ಸತ್ವವೂ ಅಧಿಕವಾಗಿತ್ತೆಂದೇ ಊಹಿಸಲು ಅನುಮಾನವೇನು ? ಆದರೆ ಇದಮಿತ್ಥಂ ಎಂದು ನಮಗೆ ಆಗಿನ ಶಿಕ್ಷಣ ಸಂಸ್ಥೆಗಳ ವಿಚಾರ ತಿಳಿಯದಿದ್ದರೂ ಸುವ್ಯವಸ್ಥಿತವಾದ ಓದು, ಬರೆಹ, ಗಣಿತಗಳ ಜೊತೆಗೆ ವ್ಯವಹಾರ, ಸಾಮಾಜಿಕ ಪ್ರಜ್ಞೆ, ಭೌಗೋಳಿಕ ಪ್ರಜ್ಞೆ, ವ್ಯವಸಾಯ ಇತ್ಯಾದಿ ವಿಷಯಗಳ ಶಿಕ್ಷಣವನ್ನು ಕರ್ನಾಟಕದ ಶಿಕ್ಷಣ ಸಂಸ್ಥೆಗಳು ನೀಡಿಯೇ ನೀಡುತ್ತಿದ್ದವೆಂದು ಹೇಳಲನುಮಾನವೇ ಬಾರದು.

ಶಿಕ್ಷಣಕ್ಕಾಗಿ ಯಾವುದು ಯಾವುದು ಸಂಬಂಧವುಳ್ಳದಾಗಿತ್ತೋ ಅದರ ಮೂಲ ನೆಲವೂ ಧರ್ಮದಲ್ಲಿಯೇ ಇತ್ತು. ಭಾರತದಲ್ಲಿಯ ಶಿಕ್ಷಣವು ಅನಾದಿಕಾಲದಿಂದಲೂ ಧರ್ಮದ ಆಶ್ರಯದಲ್ಲಿಯೇ ಬೆಳೆದು ಬಂದಿತು. ಇದೇ ಪ್ರಕಾರದ ಅನೇಕಾನೇಕ ಉದಾಹರಣೆಗಳುಂಟು. ಹಳ್ಳಿಗಳಲ್ಲಿ ಬಹುತರವಾಗಿ ಗುಡಿಗಳು ಶಾಲಾಗೃಹಗಳಾಗಿಯೇ ಇದ್ದವು. ಇಂದಿಗೂ ಈ ರೀತಿ ಹಲವಾರು ಕಡೆ ಮುಂದುವರಿಯುತ್ತಲೇ ಇದೆ. ಗುಡಿಯ ಆಸ್ತಿಯ ಬಗ್ಗೆ ಭಿನ್ನಾಭಿಪ್ರಾಯವೆದ್ದಾಗ ಸರಕಾರವು ಪ್ರವೇಶಿಸಿ, ಸ್ಥಾನಿಕರ ಗೌರವಕ್ಕೆ ಧಕ್ಕೆತಗಲದಂತೆ ವ್ಯವಸ್ಥೆ ಮಾಡುತ್ತಿತ್ತು. ಕ್ರಮೇಣವಾಗಿ ಇಂಥ ಗುಡಿಗಳಗುಂಪು ಮತ್ತು ಮಠಗಳು ಬೆಳೆದು ಅಗ್ರಹಾರಗಳಾಗಿ ಪರಿವರ್ತನೆಗೊಂಡವು. ಈ ಅಗ್ರಹಾರಗಳಿಗೆ ಸಾಕಾದಷ್ಟು ದಾನದತ್ತಿಗಳೂ ಸಿಗುತ್ತಿದ್ದವು. ಸಂಪತ್ತಿನ ಸ್ಥಿತಿಯುಳ್ಳ

---

13 1) EC. VII SK 118. 1054 ಮತ್ತು SII, IX. i. 118. 1057 AD: ಈ ಶಾಸನಗಳಲ್ಲಿ—"ಸಮಸ್ತಭುವನವಿಖ್ಯಾತ, ಪಂಚಶತ ವೀರಶಾಸನಲಬ್ಧಾನೇಕ ಗುಣಾಳಂಕೃತ ಸತ್ಯಶೌಚಾಚಾರ ಚಾರುಚಾರಿತ್ರ ನಯ ವಿನಯ ವಿಜ್ಞಾನ ವೀರ ಬಣಂಜು ಧರ್ಮ ಪ್ರತಿಪಾಲ . . . ." ಇತ್ಯಾದಿಯಾಗಿ ಇವರ ಹೊಗಳಿಕೆಯಿದೆ. 2) ಇನ್ನೊಂದು SII. IX i 297,1177 AD. ಯ ಶಾಸನದಲ್ಲಿ "ಅನೂನಸಾಹಸ ಲಕ್ಷ್ಮೀ ಆಲಿಂಗಿತ ವಕ್ಷಸ್ಥಳ ಭುವನ ಪರಾಕ್ರಮೋನ್ನತರುಂ"

14 i) SII, IX, i. 297, 1177 AD.

ii) "ವರ್ತಕರ ವ್ಯಾಪಾರದ ಅಭಿವೃದ್ಧಿಯಲ್ಲಿ ರಾಜನು ಸದಾ ಆಸಕ್ತನಾಗಿರಬೇಕು. ಏಕೆಂದರೆ ಅವರಿಂದ ರಾಜ್ಯವು ಬಲಿಷ್ಠವಾಗುತ್ತದೆ. ವ್ಯವಸಾಯವು ಊರ್ಜಿತವಾಗುತ್ತದೆ. ಸಂಪತ್ತು ಹೆಚ್ಚುತ್ತದೆ........ರಾಜ್ಯದಲ್ಲಿ ವರ್ತಕರಿಗಿಂತ ಹೆಚ್ಚಿನ ಐಶ್ವರ್ಯ ಬೇರಾವುದೂ ಇಲ್ಲ." ಎಂದು ಮಹಾಭಾರತ ಹೇಳುತ್ತದೆ : (ಕ.ಶಾ.ಸಾಂ.ಅ. ಡಾ॥ ಎಂ. ಚಿದಾನಂದ ಮೂರ್ತಿ ಪುಟ 380 ಅಡಿಟಪ್ಪಣಿ.

15 ಸೋ. ಅ. ಫೋ. ಲೈಫ್. ಇನ್. ದಿ. ವಿ. ಎಂಪೈರ್ II P. 99

16 ಕ. ಶಾ. ಸಾ. ಅ. (—ಡಾ॥ ಎಂ. ಚಿದಾನಂದಮೂರ್ತಿ) ಪು. 386.
"ಉದಾಹರಣೆಗೆ ಬಳ್ಳಿಗಾವೆಯ ವರ್ತಕರು ತಮ್ಮಲ್ಲಿ ಯಾರಾದರೂ ಅಪುತ್ರಕರಾಗಿ ಮಡಿದರೆ ಅವರ ಆಸ್ತಿಯು ಆ ಊರಿನ ದೇವಸ್ಥಾನಕ್ಕೆ ಸಲ್ಲಬೇಕೆಂದು ತೀರ್ಮಾನಿಸುವುದನ್ನು ಇಲ್ಲಿ ನೆನೆಯಬಹುದು."

17 R. ನರಸಿಂಹಚಾರ್ : 'Karnataka Country' (Quarterly Journal of the mythic Society XP. 251)
—ಡಾ॥ ಎಂ. ಚಿ. ಮೂರ್ತಿ. ಕ. ಶಾ, ಸಾಂ. ಅ. ಪುಟ 387- ಅಡಿಟಪ್ಪಣಿ)

ಬ್ರಾಹ್ಮಣರೂ, ತಮ್ಮ ಕೈಲಾದ ದಾನವನ್ನು ಸಲ್ಲಿಸುತ್ತಿದ್ದರು. ಶಿಕ್ಷಣಕ್ಕಾಗಿ, ವ್ಯಕ್ತಿಗತವಾಗಿಯೂ, ಸಾಮೂಹಿಕವಾಗಿಯೂ ದಾನಗಳು ದೊರೆಯುತ್ತಿದ್ದವು ಕೆಲವೊಂದು ಸಂದರ್ಭಗಳಲ್ಲಿ ಅಗ್ರಹಾರದ ಜನರು ಗುಡಿಗುಂಡಾರಗಳಲ್ಲಿ ನೃತ್ಯಮಾಡುವ ಹೆಣ್ಣುಮಕ್ಕಳಿಗಾಗಿ ದಾನಗಳನ್ನು ನೀಡುತ್ತಿದ್ದರು. ಇವರು "ದೇವದಾಸಿ" ಯರೆಂದು ಪ್ರಖ್ಯಾತರಾಗಿರುವ ಸೂಳೆಯರು.[18] ಇವರು ಸಮಾಜ ಶಿಕ್ಷಣದಲ್ಲಿ ಒಂದು ಅಂಗವಾಗಿದ್ದರು. ಇವರು ಶಾಸ್ತ್ರೀಯವಾದ ಭರತನಾಟ್ಯ ತತ್ತ್ವಕ್ಕನುಗುಣವಾಗಿ ನೃತ್ಯಗೀತೆಗಳಿಂದ ಕಲಾಭಿವೃದ್ಧಿಯನ್ನು ಉಂಟುಮಾಡುತ್ತಿದ್ದರು. ಎಷ್ಟೋ ಜನ ರಾಜಪರಿವಾರದ ಸ್ತ್ರೀಯರೂ ಈ ನೃತ್ಯಗೀತೆಗಳಲ್ಲಿ ನಿಷ್ಣಾತೆಯರೆನಿಸಿ ದೇವರೆದುರು ನೃತ್ಯಮಾಡುತ್ತಿದ್ದ ಬಗೆಗೆ ನಮಗೆ ಆಧಾರ ದೊರಕುತ್ತವೆ.[19] ಇದರ ಮೇಲಿಂದ ಗುಡಿಗಳು ಯಾವ ಯಾವ ರೀತಿಯ ಸಾಂಸ್ಕೃತಿಕ ಕೇಂದ್ರಗಳಾಗಿದ್ದುವೆಂಬುದರ ಬಗೆಗೂ ಅವುಗಳಿಗೆ ದಾನದತ್ತಿಗಳನ್ನು ಬಿಟ್ಟುಕೊಡುತ್ತಿದ್ದುದರ ಬಗೆಗೂ, ಆಗಿನ ಜನರ ಆರ್ಥಿಕಪರಿಸ್ಥಿತಿಯ ಬಗೆಗೂ ನಮಗೆ ಹಲವಾರು ಅಂಶಗಳು ಗೋಚರವಾಗುತ್ತವೆಂಬುದು ಸ್ಪಷ್ಟಪಡಿಸಲಾಯಿತು. ವಿಜಯನಗರದ ರಾಜಧಾನಿಯಲ್ಲಿ ಪ್ರತಿಯೊಂದು ಬೀದಿಯಲ್ಲಿಯೂ, ಭವ್ಯವಾದ ಗುಡಿಗಳಿದ್ದು ವೆಂಬುದನ್ನು ಈಗಲೂ ಅವುಗಳ ಅವಶೇಷದಿಂದ ಕಾಣಬಹುದಾಗಿದೆ. "ಅಲ್ಲಲ್ಲಿ ಶಿಲ್ಪಕಲಾ ನೈಪುಣ್ಯದ ಕುಸುರಿಗೆಲಸದಿಂದ ಕೆತ್ತಿದ ಗುಡಿಗಳಿದ್ದವು. ಅವು ಹಿಂದೂ ದೇವತೆಗಳಿಗೆ ವಾಸಸ್ಥಾನಗಳಾಗಿದ್ದವು. ಇಂಥ ಕೆಲವು ಗುಡಿಗಳಲ್ಲಿ ಬ್ರಾಹ್ಮಣರ ಶಾಲೆ ಕಾಲೇಜುಗಳು ಜೋಡಿಸಲ್ಪಟ್ಟಿದ್ದವು."[20]

ವಿಜಯನಗರ ರಾಜಧಾನಿಯೇ ಸ್ವತಃ ಶಿಕ್ಷಣದ ಮುಖ್ಯ ಕೇಂದ್ರವೆನಿಸಿತ್ತು. ವ್ಯಾಸರಾಯ ಯೋಗಿಗಳು ಕೃಷ್ಣದೇವರಾಯನಿಂದ ಬಹಳ ಗೌರವಪೂರ್ವಕವಾಗಿ ಮನ್ನಿಸಲ್ಪಟ್ಟಿದ್ದರು. ಅವರು ವಿಜಯನಗರದ ವಿಶ್ವವಿದ್ಯಾನಿಲಯದ ಕುಲಪತಿಗಳಾಗಿ

---

18 ದೇವದಾಸಿಯರೆಂದರೆ ಭಗವಂತನ ದಾಸಿಯರು. ದೇವರಸೇವೆಗೆ ಮೀಸಲಾದವರು ಎಂದರ್ಥ. ಕನ್ನಡಶಾಸನಗಳಲ್ಲಿ "ದೇವದಾಸಿ" ಎಂಬಪದ ಬಂದಿಲ್ಲ. ಅದರಬದಲು ಸೂಳೆ ಎಂಬಪದ ಬರುವುದೇ ಹೆಚ್ಚು. "ಪಾತ್ರ" ಎಂಬುದೂ ದೇವದಾಸಿಯನ್ನೇ ಸೂಚಿಸುತ್ತದೆ. ಸೋಮೇಶ್ವರನ ಅಭಿಲಷಿತಾರ್ಥ ಚಿಂತಾಮಣಿ ಕ್ರಿ.ಶ. (1129-30) ಯಲ್ಲಿ ದೇವಸ್ಥಾನಗಳಿಗೆ ಕೊಡಬೇಕಾದ ವಸ್ತುಗಳಲ್ಲಿ "ದಾಸಿಕೆ" ಯರನ್ನು ಹೆಸರಿಸಿದೆ. "ಗೃಹಂ ಗ್ರಾಮಸ್ತಥಾ ಭೂಮಿರ್ದಾಸಿಕಾದ್ಯಾ ವಿಭೂಷಣಂ" (1060) ಇಲ್ಲಿ "ದಾಸಿಕಾ" ಎಂದರೆ ದೇವದಾಸಿಯೆಂದರ್ಥ. (ಕ.ಶಾ.ಸಾಂ.ಅ. ಡಾ॥ ಎಂ. ಚಿ. ಮೂರ್ತಿ. ಪು. 180)

19 ಪ್ರಭುಲಿಂಗಲೀಲೆಯಲ್ಲಿ ಬರುವ ಮಮಕಾರ ಮೋಹಿನಿಯರಮಗಳು ಮಾಯಾದೇವಿ ಬನವಾಸಿಯ ಮಧುಕೇಶ್ವರ ದೇವಾಲಯದಲ್ಲಿ ನೃತ್ಯಮಾಡುತ್ತಿದ್ದಳೆಂಬ ವಿಷಯ ಮತ್ತು ಹೊಯ್ಸಳ ಬಿಟ್ಟಿದೇವನ ಪಟ್ಟಮಹಿಷಿ "ಶಾಂತಲಾ" ದೇವಿಯು ಬೇಲೂರು ಚೆನ್ನಕೇಶವ ದೇವನೆದುರಿನ ನೃತ್ಯ ಇವು ಹೆಸರಿಸತಕ್ಕ ವಿಷಯಗಳು.

20 ಎ. ಪಾರಗಾಟನ್ ಎಂಪಾಯರ್ P. 82.



ದ್ದರೆಂದು ಸೋಮನಾಥ ಕವಿಯು ಬಣ್ಣಿಸಿದ್ದಾನೆ. ಬಹುಖ್ಯಾತಿವೆತ್ತ ಪಂಡಿತರು ಅವರ ಶಿಷ್ಯರಾಗಿದ್ದರು. ಅವರಲ್ಲಿ ಶ್ರೀನಿವಾಸ ತೀರ್ಥರು, ಗೋವಿಂದವೊಡೆಯರು ವಾದಿರಾಜರು ಇವರೇ ಮೊದಲಾದವರು ಪ್ರಮುಖರಾಗಿದ್ದರು.[21] ವ್ಯಾಸರಾಯರು ಕರ್ನಾಟಕದಲ್ಲಿಯ ದಾಸಕೂಟಕ್ಕೆ ತಂದೆಯೋಪಾದಿಯಲ್ಲಿದ್ದರು. ಅನೇಕ ಜನ ಶಿಷ್ಯರನ್ನೂ ಜನಸಮೂಹಕ್ಕೆ ಉಪದೇಶಿಸುವುದರ ಸಲುವಾಗಿ ಕಳುಹಿಸಿದ್ದರು. ಆ ಶಿಷ್ಯರು ಕೀರ್ತನೆಗಳಿಂದಲೂ, ಪದಗಳಿಂದಲೂ, ಹರಿಕಥೆ ಮೊದಲಾದವುಗಳಿಂದಲೂ ಮನೆಮನೆಗಳವರೆಗೆ ತಮ್ಮ ಜ್ಞಾನ ಭಂಡಾರವನ್ನು ಬೀರಿದರು. ಅಂಥವರಲ್ಲಿ ಪುರಂದರ ದಾಸರು, ಕನಕದಾಸರು, ವಾದಿರಾಜರು ಬಹುಳ ಪ್ರಖ್ಯಾತಿವೆತ್ತವರಾಗಿದ್ದರು. ಲಿಂಗಾಯತರೂಕೂಡ ಈ ಕೀರ್ತನೆಗಳು, ಪದಗಳು, ಶಿವಕಥೆಗಳು, ಗುಡಿಗಳೂ ಇವುಗಳನ್ನು ಧರ್ಮೋಪದೇಶಕ್ಕೆ ದಾಸಕೂಟದ ಇವರ ಮಾದರಿಯಲ್ಲೆ ಮುಂದುವರಿಸಿಕೊಂಡುಬಂದರೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಈ ಅಭಿಪ್ರಾಯಕ್ಕೆ ಸಾಕಷ್ಟು ಆಧಾರಗಳಿಲ್ಲವೆಂದು ಹೇಳಬಹುದು. ಏಕೆಂದರೆ ದಾಸಕೂಟ ಪ್ರಾರಂಭವಾಗುವ ಪೂರ್ವದಲ್ಲಿ ಲಿಂಗಾಯತ ಧರ್ಮದ ಪ್ರಸಾರವು ಕಳಿಂಗ, ತಮಿಳುನಾಡು, ತೆಲಗು ದೇಶಗಳಲ್ಲಿ ಅನೇಕಜನ ಶರಣರಿಂದ ಈ ಮಾದರಿಯಲ್ಲಿ ಪ್ರಚಾರವಾಗುತ್ತಿತೆಂಬುದನ್ನು ಸಮಕಾಲೀನ ಸಾಹಿತ್ಯದಿಂದ ಅರಿಯಬಹುದಾಗಿದೆ. ಲಿಂಗಾಯತರು ತಮ್ಮದೇ ಆದ ಮಾರ್ಗದಲ್ಲಿ ಮಠಗಳನ್ನು ಪ್ರತಿಷ್ಠೆಗೊಳಿಸಿ ಅದರ ಮುಖಾಂತರ ತಮ್ಮ ಧಾರ್ಮಿಕ ಪ್ರಚಾರವನ್ನು ಸಾಧಿಸಿಕೊಂಡಿದ್ದರು. ಪ್ರಸಂಗ ಬಂದಾಗ ಗುಡಿಗಳ ಲಾಭವನ್ನು ಪಡೆದುಕೊಳ್ಳುತ್ತಿದ್ದರು.

ವಿಜಯನಗರದ ರಾಜರಕಾಲದಲ್ಲಿ ಬಹುಸಂಖ್ಯಾತರಾಗಿ ಉಳ್ಳಂಥ ಈ ಲಿಂಗಾಯತ ಜಾತಿಯು ಕರ್ನಾಟಕದಲ್ಲಿ ಗಣನೀಯ ಸಮಾಜವೆಂದು ಭಾವಿಸಲ್ಪಟ್ಟಿತ್ತು. ಈ ಜಾತಿಯವರ ಮುಖ್ಯ ಉದ್ಯೋಗವೆಂದರೆ ಒಕ್ಕಲುತನ. ಈ ಪ್ರಮುಖ ಉದ್ಯೋಗದೊಂದಿಗೆ ವ್ಯಾಪಾರಸ್ಥರೂ (ಬಣಜಿಗರೂ) ಹೊಲದೊಡೆಯರೂ, ಸಾಹಿತಿಗಳೂ, ಗಾಣಿಗರೂ ಅಷ್ಟೇ ಏಕೆ ಎಲ್ಲ ಕಸಬಿನವರೂ ಇದ್ದರು. ಏಕೆಂದರೆ ಬಸವಣ್ಣನವರ ಕ್ರಾಂತಿಯ ಫಲವಾಗಿ ಇವರು ಎಲ್ಲ ಕಸಬುಗಳನ್ನೂ ಆಕ್ರಮಿಸಿಕೊಂಡಿದ್ದರು. ಆದರೆ ವ್ಯವಸಾಯ ಪ್ರಧಾನವಾಗಿ ಉಳ್ಳ ಜನಗಳ ಸಂಖ್ಯೆ ಹೆಚ್ಚು ಎಂದು ಹೇಳಬಹುದು. ಬಾರ್ಬೋಸನು[22] "ಈ ರಾಜ್ಯದಲ್ಲಿ ಬ್ರಾಹ್ಮಣರ ಜಾತಿಯವರನ್ನು ಹೋಲುವಂಥ ಇನ್ನೊಂದು ಜಾತಿಯವರು ಇದ್ದರು. ಅವರು ತಮ್ಮ ಕೊರಳೊಳಗೆ ರೇಶಿಮೆ ದಾರವನ್ನು ಹಾಕಿಕೊಂಡು ಅದಕ್ಕೆ ಕಟ್ಟಿದ ಒಂದು ಚೀಲದಲ್ಲಿ ತತ್ತಿಯಷ್ಟು ದೊಡ್ಡದಾದ ಕಲ್ಲನ್ನೇ ಇರಿಸಿಕೊಂಡು ಅದೇ ತಮ್ಮ ದೇವರೆಂದು ಹೇಳಿಕೊಳ್ಳುವಂಥದೊಂದು ಜಾತಿ

---

21 "ಕನಕದಾಸ" P44.

22 ಬಾರ್ಬೋಸಾಡವರ್ಸ್ I. P. 212-13

ಯಿತ್ತು. ಇವರು ಬಹಳ ಗೌರವಸ್ಥಾನವನ್ನು ಪಡೆದಿದ್ದರು. ಅಲ್ಲದೆ ಇವರು ಕಲ್ಲನ್ನು ಕೊರಳಲ್ಲಿ ಕಟ್ಟಿಕೊಂಡು ಪೂಜಿಸುತ್ತಿರುವ ಕಾರಣದಿಂದಾಗಿ ಯಾರೂ ಅವರಿಗೆ ತೊಂದರೆಯನ್ನುಂಟುಮಾಡುತ್ತಿರಲಿಲ್ಲ. ಅವರು ಅದನ್ನು 'ತಾಂಬರಾನೆ' ಎಂದು ಕರೆಯುತ್ತಿದ್ದರು" ಎಂದು ಬಣ್ಣಿಸಿದ್ದಾನೆ.

ವಿಜಯನಗರದ ರಾಜರ ಆಳ್ವಿಕೆಯಲ್ಲಿ ಅಂದರೆ ೧೫ನೆಯ ಶತಮಾನದ ಪೂರ್ವಾರ್ಧದಲ್ಲಿ ಪ್ರೌಢದೇವರಾಯನ ಆಳೊತ್ತಿನಲ್ಲಿ ಇಲ್ಲಿ ೧೦೧ ಜನ ಶರಣರು ಬೆಳೆದು ಬಾಳಿದರು. ಇವರು ೧೨ನೆಯ ಶತಮಾನದಲ್ಲಿ ಕಲ್ಯಾಣದಲ್ಲಿ ಈ ಧರ್ಮ ಪ್ರಚಾರ ಮಾಡಿದ ರೀತಿಯಲ್ಲೇ ಈಗಲೂ ಮಾಡಿ ಹೆಸರಾದರು. ಇದು ವೀರಶೈವೋದ್ಧರಣದ ಸುವರ್ಣಯುಗವೆಂದರೂ ತಡೆಯುತ್ತದೆ. ಹರದನಹಳ್ಳಿಯಲ್ಲಿ[23] ಪ್ರಾಚೀನಕಾಲದಲ್ಲಿ ವೀರಬಣಂಜುಗಳೆಂಬುವರು ಅಮೃತೇಶ್ವರ ದೇವಾಲಯವೆಂಬ ಒಂದು ಶಿವಾಲಯ ಕಟ್ಟಿಸಿ ಅಲ್ಲಿ ಮೂರ್ತಿಯನ್ನು ಪ್ರತಿಷ್ಠೆಗೊಳಿಸಿ ಸಮಯಾಚಾರಕ್ಕಾಗಿ ಒಂದು ಮಠವನ್ನು ಕಟ್ಟಿಸಿದರು ಆ ಮಠವು ಕಲ್ಯಾಣದ ಶೂನ್ಯಸಿಂಹಾಸನವು ಕ್ರಿ.ಶ ೧೧೬೮ರ ಸುಮಾರಿಗೆ ನಾಶವಾದಮೇಲೆ ಆ ಶೂನ್ಯಸಿಂಹಾಸನದ ಪುನರುದ್ಧಾರದ ಕಾರ್ಯಭಾರವನ್ನು ಹೊರುವುದು.[24] ಈ ಮಠದ ಪರಂಪರೆಯಲ್ಲಿ ಗೋಸಲ ಸಿದ್ಧೇಶ್ವರರೆಂಬುವರು ಬಹುಪ್ರಸಿದ್ಧರಾದ ಕ್ರಾಂತಿಕಾರಕ ಪುರುಷರು. ಇವರ ಶಿಷ್ಯರೇ ಶಂಕರಾಚಾರ್ಯ-ಸ್ವಾಮಿ (ಶಂಕರಸ್ವಾಮಿ) ಗಳೆಂಬುವರು. ಇವರು ಜನಜಾಗೃತಿಗಾಗಿ ದೇಶಸಂಚಾರ ಕೈಗೊಂಡು ವಿಜಯನಗರದ ಪ್ರೌಢದೇವರಾಯನಿಗೆ ವೀರಶೈವೋಪ ದೀಕ್ಷೆಕೊಟ್ಟು ಇವರ ಕಾಲದಲ್ಲಿಯೇ ಉದ್ಭವಗೊಂಡ ೧೦೧ಜನ ವಿರಕ್ತರಿಗೆ ಷಟ್‌ಸ್ಥಲಜ್ಞಾನೋ-ಪದೇಶ ಮಾಡಿದರೆಂದು ನಿರಂಜನವಂಶರತ್ನಾಕರವೆಂಬ ಗ್ರಂಥ ಸಾರುತ್ತದೆ. ಈ ವಿಚಾರವನ್ನವಲೋಕಿಸಿದರೆ ಹರಪನಹಳ್ಳಿಯ ಶೂನ್ಯಸಿಂಹಾಸನದ ಪರಂಪರೆಯವರೇ ವಿಜಯನಗರ ಪಟ್ಟಣವು ಕಲ್ಯಾಣದಂತೆ ಧರ್ಮಜಾಗೃತಿಗೆ ಪ್ರವೃತ್ತವಾಗಲು ಕಾರಣವಾಯಿತೆಂಬಂಶವು ವ್ಯಕ್ತವಾಗುವುದು. ಈ ನೂರೊಂದು ವಿರತರು ಉದಯಗೊಂಡು ಪುನಃ ವಿಜಯನಗರವನ್ನು ದ್ವಿತೀಯ ಕಲ್ಯಾಣವನ್ನಾಗಿ ಮಾಡಿದರು. ಈ ಕಾಲದಲ್ಲಿ ನಡೆದ ಕಾರ್ಯವೆಂದರೆ ಅನಂತ ಶರಣರು ಕಲ್ಯಾಣದಲ್ಲಿ ರಚಿಸಿದ ವಚನಗಳನ್ನು ಸಂಪಾದನೆಮಾಡಿ ಅವುಗಳಿಗೆ ಟೀಕೆ ಟಿಪ್ಪಣಿಗಳನ್ನು ಬರೆದು ಜನತೆಗೆ ತಿಳಿಯುವಂತೆ ಮಾಡಲು ನಡೆಸಿದ ಪ್ರಯತ್ನವೂ, ಶಿಕ್ಷಣಪ್ರಸಾರವೂ ಮುಖ್ಯವಾದವು. ಈ ನೂರೊಂದು ವಿರತರ ಜೊತೆಗೆ ಅನೇಕ ವಿದ್ವಾಂಸರ ಸಹಕಾರವೂ ಸಿಕ್ಕಿತು. ವಚನಗಳನ್ನು ಸ್ಥಲಕಟ್ಟುಗಳಿಗನುಗುಣವಾಗಿ ಜೋಡಿಸಿ ವಿಭಾಗಿಸುವುದು ; ಈ

23 ಈಗಿನ ಚಾಮರಾಜನಗರ ತಾಲ್ಲೂಕಿನ ಹಳ್ಳಿ.

24 ನಿರಂಜನವಂಶ ರತ್ನಾಕರ.



ವಚನಗಳ ಆಧಾರದ ಮೇಲೆ ವೀರಶೈವಧರ್ಮದ ಸಿದ್ಧಾಂತ ತತ್ವಗಳನ್ನು ತಿಳಿಸುವ ಗ್ರಂಥ ರಚನೆ ಮಾಡುವುದು ಇವೇ ಮೊದಲಾದ ಕಾರ್ಯಗಳು ಭರದಿಂದ ನಡೆದವು. ಲಿಂಗಲೀಲಾವಿಲಾಸಚಾರಿತ್ರ ಪ್ರಭುಲಿಂಗಲೀಲೆ, ಗಣಭಾಷಿತ ರತ್ನಮಾಲೆ, ಬಹು ಕಠಿಣವೆನಿಸಿದ ಪ್ರಭುದೇವರ ವಚನಗಳ ಟೀಕೆ, ಶೂನ್ಯಸಂಪಾದನೆ, ವೀರಶೈವ ಶರಣರ ವಿಶ್ವಕೋಶದಂತಿರುವ ಶಿವತತ್ತ್ವ ಚಿಂತಾಮಣಿ ಮೊದಲಾದ ಗ್ರಂಥಗಳು ಬಸವಣ್ಣ-ನವರೇ ಮೊದಲಾದ ಪ್ರಮಥರ ವಚನರಾಶಿಯನ್ನು ಬಳಸಿಕೊಂಡು ನೂತನ ಸಂವಿಧಾನದಿಂದ ವೀರಶೈವ ಸಿದ್ಧಾಂತ ಮತ್ತು ವೀರಶೈವದ ಕ್ರಾಂತಿ ತತ್ತ್ವಗಳನ್ನು ಜನತೆಯಮುಂದಿಟ್ಟ ಪ್ರಯತ್ನಕ್ಕೆ ಪ್ರತ್ಯಕ್ಷ ನಿದರ್ಶನಗಳು. ಈ ಗ್ರಂಥಗಳು ಐತಿಹಾಸಿಕ, ಧಾರ್ಮಿಕ, ಸಾಮಾಜಿಕ ದೃಷ್ಟಿಯಿಂದ ಬಹು ಮಹತ್ವದ ಗ್ರಂಥಗಳು. ಈ ಪೀಠದ ಅಂದರೆ ಹರದನಹಳ್ಳಿ ಪೀಠದ ಗುರುಗಳವರು ಒಂದುಕಡೆ ಕುಳಿತುಕೊಂಡು ಧರ್ಮಜಾಗೃತಿ, ಸಮಾಜದ ಜಾಗೃತಿ, ಶೈಕ್ಷಣಿಕ ಜಾಗೃತಿ ಮಾಡಿದವರಲ್ಲ ದೇಶವನ್ನು ಸುತ್ತಿ ಸುತ್ತಿ ಅಲ್ಲಲ್ಲಿ ಕೆಲ ಕೆಲವು ದಿನಗಳು ತಂಗಿ ಜನಜಾಗೃತಿ ಮಾಡುತ್ತಿದ್ದರು. ಅಲ್ಲಲ್ಲಿ ಹೊಸ ಹೊಸ ಮಠಗಳನ್ನು ಸ್ಥಾಪಿಸುವುದು, ಅವಕ್ಕೆ ಯೋಗ್ಯರಾದ ಸ್ವಾಮಿಗಳನ್ನು ಆರಿಸುವುದು,ಅಲ್ಲಿ ಧಾರ್ಮಿಕ ಮತ್ತು ಲೌಕಿಕ ಶಿಕ್ಷಣಕ್ಕೆ ಅನುಕೂಲ ಪಡಿಸುವುದು, ಜನತೆಯಲ್ಲಿ ಸಾಕ್ಷರ ಪ್ರಸಾರ, ನೀತಿರೀತಿಗಳನ್ನು ತಿದ್ದುವಿಕೆಯೇ ಮೊದಲಾದ ರಚನಾತ್ಮಕ ಕಾರ್ಯಗಳಲ್ಲಿ ತೊಡಗಿದರು. ನೂತನವಾಗಿ ಕ್ರಿಯಾಪರಿ-ಶುದ್ಧರೆಂದು ಕಂಡುಬಂದು ವೀರಶೈವ ದೀಕ್ಷೆ ತೆಗೆದುಕೊಳ್ಳಬೇಕೆನ್ನುವವರಿಗೆ ವೀರಶೈವ ದೀಕ್ಷೆಕೊಟ್ಟು ಆಚಾರಸಂಪನ್ನರನ್ನಾಗಿ ಮಾಡುವುದರ ಜೊತೆಗೆ ಮಠ ಮಠಗಳಲ್ಲಿ ಅಕ್ಷರಾಭ್ಯಾಸ, ಶಾಸ್ತ್ರಾಭ್ಯಾಸಗಳಿಗೆ ಅನುಕೂಲ ಪಡಿಸುವುದೂ, ಪ್ರಾಥಮಿಕ ಶಾಲೆಗಳನ್ನು ಸ್ಥಾಪಿಸುವುದೂ ಅವನ ಜನಾಂಗದ ಮಕ್ಕಳು ಶಿಕ್ಷಣ ಪಡೆಯಲು ಸೌಲಭ್ಯ ಕಲ್ಪಿಸುವುದೇ ಮೊದಲಾದ ದೇಶದ ವಿದ್ಯಾಭ್ಯಾಸದ ಹೊಣೆಯನ್ನೇ ಹೊತ್ತಿದ್ದರೆಂಬುದು ಬಹು ಗಮನಾರ್ಹವಾದ ಅಂಶವಾಗಿದೆ. ಇಂದಿಗೂ "ಅಯ್ಯನವರ ಮಠ" ಎಂಬ ಮಾತನ್ನೂ ಕೇಳುತ್ತಿದ್ದೇವೆ. ಮಠದ ಅಯ್ಯನವರು ಆ ಕಾಲದಲ್ಲಿ ಮಾಡಿದ ಶೈಕ್ಷಣಿಕ ಪ್ರಚಾರ ಬಹು ದೊಡ್ಡದು. ಅದರಲ್ಲೂ ಹಿರಿಯ ಮಠ, ಚಿಕ್ಕಮಠ, ಆದ್ರ್ಯ ಮಠ, ನಡುವಿನ ಮಠ.... ಇತ್ಯಾದಿ ಅನೇಕ ಮಠಗಳ ಹೆಸರನ್ನೂ ಕೇಳುತ್ತೇವೆ. ಇವೆಲ್ಲ ಪಾಠಶಾಲೆಗಳೇ ಆಗಿದ್ದುದರ ಜೊತೆಗೆ ಸರ್ವ ಸಮಾಜದವರ ಪುರಸ್ಕಾರ ಮನ್ನಣೆಗಳಿಗಾಗಿ ಪಾತ್ರವಾಗಿದ್ದವು. ಯಾಕೆಂದರೆ ಇವು ಸಮಾಜದ ಶೈಕ್ಷಣಿಕ ಕೇಂದ್ರಗಳಾಗಿದ್ದವು. ಮಠದ ಅಯ್ಯನವರು ಎಂದರೆ ಅಪೂರ್ವ ಗೌರವ. ಅಯ್ಯನವರೂ ಕೂಡ ಆಚಾರ ನಿಷ್ಠರಾಗಿದ್ದುಕೊಂಡು ಸೇವೆ ಸಲ್ಲಿಸುತ್ತಿದ್ದರು. ಜನರು ಧಾರ್ಮಿಕವಾಗಿ, ಸಾಮಾಜಿಕವಾಗಿ ನಯನೀತಿಗಳಿಂದ ನಡೆದುಕೊಳ್ಳುವಂತೆ ಬೋಧಿಸುತ್ತಿದ್ದರು. ಪುರಾಣ ಪ್ರವಚನಗಳ ಮೂಲಕ ಸಾರ್ವಜನಿಕರಲ್ಲಿ ಸಂಸ್ಕೃತಿ ಸಂವರ್ಧನೆಯ ಕಾರ್ಯ ಮಾಡುತ್ತಿದ್ದರು, ಇಂಥ ಮಠಗಳಲ್ಲಿಯೇ ದೊಡ್ಡ ದೊಡ್ಡ ಕವೀಶ್ವರರೂ, ಶಿವಾಗಮ

ಜ್ಞಾನಚರ್ಯಾಕಾಂಡ ಪಂಡಿತರೂ, ವಚನಸಿದ್ಧಾಂತ ಕೋವಿದರೂ, ಜ್ಯೋತಿ ಶ್ಯಾಸ್ತ್ರ ನಿಪುಣರೇ ಮೊದಲಾದವರು ವಿದ್ಯಾಭ್ಯಾಸಮಾಡಿ ಆ ಕಾಲದಲ್ಲಿ ಕಾಣಿಸಿಕೊಂಡಿದ್ದಾರೆ. ಆರ್ಯ ಶಬ್ದದ ತದ್ಭವವೇ "ಅಯ್ಯ" ಎಂಬ ಗೌರವ ವಾಚಕ ಶಬ್ದ. ಈ ಶಬ್ದವು ವೀರಶೈವರಲ್ಲಿ "ಅಯ್ಯನವರು" ಮಠದ ಅಯ್ಯನವರು ಎಂಬ ಸಂಗಡದ ನಿರ್ಮಾಣಕ್ಕೆ ಕಾರಣವಾಗಿದೆ. ಇಂದಿಗೂ "ಮಠದ ಅಯ್ಯನವರು" ಎಂಬ ಹೆಸರು ಕೇಳುತ್ತಿದ್ದೇವೆ. ಅಂತೂ ಆ ಕಾಲದಲ್ಲಿ ವೀರಶೈವ ಮಠಗಳೇ ಸಾರ್ವಜನಿಕ ಪಾಠಶಾಲೆಗಳಾಗಿದ್ದವು. ಈ ಪಾಠಶಾಲೆಗಳಲ್ಲಿ ಸರ್ವ ಕೋಮಿನವರೂ ಅಕ್ಷರಾಭ್ಯಾಸಮಾಡುತ್ತಿದ್ದರು. ಸಕಲ ಜನಾಂಗದವರ ಸಂಸ್ಕೃತಿಯ ಅಭಿವೃದ್ಧಿಗೆ ವೀರಶೈವ ಸಮಾಜ ಬಲು ಹೆಣಗಿದೆ. ಗ್ರಾಮ ಗ್ರಾಮಗಳಲ್ಲಿ ನಡೆಯುವ ಶುಭ ಶೋಭನಗಳಿಗೆ ಮಠದ ಅಯ್ಯನವರದೇ ಪ್ರಧಾನ ಸ್ಥಾನವಾಗಿತ್ತು. ಇಂಥ ಒಂದು ಭವ್ಯ ಪರಂಪರೆಯನ್ನು ಹರದನಹಳ್ಳಿಯ ಶೂನ್ಯ ಸಿಂಹಾಸನ ಮಠದ ಸ್ವಾಮಿಗಳು ಹಾಕಿ ಕೊಟ್ಟರು. ಅವರಲ್ಲಿ ಮುಖ್ಯವಾಗಿ ಮಹಾ ಕ್ರಾಂತಿ ಮಾಡಿದ ಗೋಸಲ ಸಿದ್ಧೇಶ್ವರರು, ಶಂಕರಾಚಾರ್ಯರು, ಗುಬ್ಬಿ ಚನ್ನಬಸವೇಶ್ವರರು, ತೋಂಟದ ಸಿದ್ಧಲಿಂಗೇಶ್ವರರು ಮುಖ್ಯರಾದವರು. ಮುಂದೆ ಇವರ ಪರಂಪರೆಯೇ ಬೆಳೆದು ಈ ಸಮಾಜದಲ್ಲಿ ಕಾಣಿಸಿಕೊಳ್ಳುತ್ತಿರುವ ಸಿದ್ಧಗಂಗಾಮಠ ಹುಬ್ಬಳ್ಳಿ ಮೂರುಸಾವಿರ ಮಠ, ಡಂಬಳಮಠ, ಚಿತ್ರದುರ್ಗದ ಮಠಗಳೇ ಮೊದಲಾದುವನ್ನು ಇಂದು ಕಾಣುತ್ತಿದ್ದೇವೆ. ಇವರೆಲ್ಲರೂ ಈಗಲೂ ವಿದ್ಯಾಭ್ಯಾಸದ ವಿಷಯದಲ್ಲಿ ಅಪೂರ್ವ ಸೇವೆ ಸಲ್ಲಿಸುತ್ತಿದ್ದಾರೆ. ಇದೆಲ್ಲ ಹಿಂದಿನವರ ಭವ್ಯಾದರ್ಶವಲ್ಲದೆ ಬೇರಿಲ್ಲ.

ಹರದನಹಳ್ಳಿ ಮಠದ ಪರಂಪರೆಯ ಸ್ವಾಮಿಗಳು ತಮ್ಮ ಮಠದಲ್ಲಿಯೇ ಕೂಡದೆ ದೇಶವನ್ನು ಸಂಚರಿಸಿ ಧರ್ಮಜಾಗೃತಿಕಾರ್ಯ ಕೈಕೊಂಡದ್ದರಿಂದ ಅವರು ಎಲ್ಲೆಲ್ಲಿನಿಂತು ಧರ್ಮಪ್ರಚಾರಮಾಡುತಿದ್ದರೋ ಅಲ್ಲಲ್ಲಿಯೇ ದೇಹವನ್ನು ಬಿಟ್ಟುದರಿಂದ ಅಲ್ಲಲ್ಲಿ ಇವರ ಗದ್ದುಗೆಗಳು ಇದ್ದು ಅವು ಪವಿತ್ರಕ್ಷೇತ್ರಗಳೆನಿಸಿವೆ. ಉದಾಹರಣೆಗೆ ಗುಬ್ಬಿ, ಸಿದ್ಧಗಂಗೆ, ಹರದನಹಳ್ಳಿ ನಾಯಕನಹಟ್ಟಿ, ಮಾದೇಶ್ವರ ಬೆಟ್ಟ, ಶ್ರೀಶೈಲ ಪ್ರಭುಸ್ವಾಮಿ ಬೆಟ್ಟ, ಎಡೆಯೂರು, ಕಗ್ಗೆರೆ, ಕದಳಿಯ ವನ, ಅಣ್ಣಾಮಲೈ, ತೇರದಾಳ್ ಕಲ್ಲೂರು, ಸಿದ್ಧರಬೆಟ್ಟ (ಕೊರಟಗೆರೆ ಸಮೀಪ), ಮುನಿಸಲ್ಲಿ, ಇಸಳೂರು—ಮುಂತಾದ ಊರುಗಳನ್ನು ಹೆಸರಿಸಬಹುದು[25]. ಇವು ಇಷ್ಟೊಂದು ಪವಿತ್ರಕ್ಷೇತ್ರಗಳಾಗಿರುವುದಕ್ಕೆ ಕಾರಣ ಆ ಮಠದಸ್ವಾಮಿಗಳು ಸಾರ್ವಜನಿಕರಲ್ಲಿ ತೋರಿದ ಸೇವಾ ಮನೋಭಾವ ಕಾರಣವಾಗಿವೆ. ತೋಂಟದ ಸಿದ್ಧಲಿಂಗೇಶ್ವರರು ಪ್ರವಾಸ ಮಾಡಿದ ಸ್ಥಳಗಳನ್ನು ಸಿದ್ಧೇಶ್ವರ ಪುರಾಣ, ಸಿದ್ಧಲಿಂಗೇಶ್ವರ ಸಾಂಗತ್ಯಗಳೆಂಬ ಗ್ರಂಥಗಳು ಸೂಚಿಸುತ್ತವೆ. ಮುಖ್ಯವಾಗಿ ಅವರು ಹಂಪೆ, ತ್ರ್ಯಂಬಕೇಶ್ವರ, ಶಿವಗಂಗೆ, ರಾಮೇಶ್ವರ, ಪೊನ್ನಾಂಬಲ, ಕಾಂಚಿ, ಕಾಳಹಸ್ತಿ, ಚಿದಂಬರ, ಅರುಣಾಚಲ ಸಿದ್ಧಗಂಗೆ, ತುಮಕೂರು ಗುಬ್ಬಿ ಎಡೆಯೂರು -ಇತ್ಯಾದಿ. ಈ ಊರುಗಳನ್ನು ತಿರುಗಿ ಅಲ್ಲಲ್ಲಿ ಕೆಲವು ದಿನ ನಿಂತು ಜಾಗೃತಿಕಾರ್ಯ ಕೈಕೊಂಡರೆಂದು ತಿಳಿಯಬರುವುದು.

[ಮುಂದುವರಿಯುವುದು]

25 ಶಿ. ವಂಶ. ರತ್ನಾಕರ.

# ಭತ್ತವನ್ನು ಕ್ರಿಮಿಕೀಟಗಳ ಹಾವಳಿಯಿಂದ ಸುರಕ್ಷಿತವಾಗಿಡಿ

—[ಐ.ಸಿ.ಎ.ಆರ್.]

ನಮ್ಮ ದೇಶದಲ್ಲಿ ಶೇಕಡ ಎಪ್ಪತ್ತೈದರಷ್ಟು ಜನ ಅಕ್ಕಿಯನ್ನು ಬಳಸುತ್ತಾರೆ. ಧಾನ್ಯದ ಒಟ್ಟು ಉತ್ಪಾದನೆಯಲ್ಲಿ ಶೇಕಡ ಐವತ್ತರಷ್ಟು ಅಕ್ಕಿಗೇ ಮೀ ಸ ಲು. ಬತ್ತವನ್ನು ಒಕ್ಕಿದ ಬಳಿಕ ೬ ರಿಂದ ೧೨ ತಿಂಗಳವರೆಗೆ ತಿನ್ನಲು ಅಥವಾ ಬೀಜಕ್ಕಾಗಿ ಸಂಗ್ರಹಿಸಲಾಗುತ್ತದೆ. ಈ ಅವಧಿಯಲ್ಲಿ ಗಣನೀಯ ಮಟ್ಟದ ಬತ್ತ ಇಲಿ–ಹೆಗ್ಗಣ ಗಳು, ಕ್ರಿಮಿ–ಕೀಟಗಳು ಮತ್ತು ಸೂಕ್ಷ್ಮಾಣು ಜೀವಿಗಳಿಂದ ಹಾಳಾಗುತ್ತದೆ. ಶೇ. ೫ ರಿಂದ ೨೫ ರಷ್ಟು ಬತ್ತ ಗುಣಮಟ್ಟದಲ್ಲಿ ಹಾಳಾಗುತ್ತದೆ ; ಸರಿಯಾಗಿ ಮೊಳಕೆ ಯೊಡೆಯದೆ, ಬೂಷ್ಟ ಹಿಡಿದು, ಮೈಕೋಟಾಕ್ಸಿನ್ ಮತ್ತಿತರ ಜೈವಿಕ ವಿ ಧ ದ ನಷ್ಟವನ್ನು ಅನುಭವಿಸಬೇಕಾಗುತ್ತದೆ. ಇದನ್ನು ನಿಯಂತ್ರಿಸಲು ಬತ್ತ ಬೆಳೆಯುವ ಎಲ್ಲ ರೈತರೂ ಕೆಲವೊಂದು ಅವಶ್ಯಕ ವಿಷಯಗಳನ್ನು ತಿಳಿದುಕೊಳ್ಳಬೇಕು.

## ಬತ್ತದ ಫಸಲನ್ನು ಯಾವಾಗ ಕಟಾವು ಮಾಡಬೇಕು ?

ಕೆಲವರು ಬತ್ತದ ತೆನೆ ಹಳದಿ ಅಥವಾ ಬಂಗಾರದ ಬಣ್ಣಕ್ಕೆ ತಿರುಗಿದ ಮೇಲೆ ಕಟಾವು ಮಾಡುತ್ತಾರೆ. ಮತ್ತೆ ಕೆಲವರು ಬತ್ತವನ್ನು ಹಲ್ಲಿನಿಂದ ಕುರುಕಿ ಕಡಿದು ಕುಯಿಲು ಮಾಡುವುದನ್ನು ನಿರ್ಧರಿಸುತ್ತಾರೆ. ಬತ್ತವನ್ನು ಹೀಗೆ ಹಲ್ಲಿನಿಂದ ಕಡಿದು ಹದ ನೋಡುವುದೇ ಉತ್ತಮ ವಿಧಾನ. ಮುಂಚೆಯೇ ಕಟಾವು ಮಾಡಿದರೆ ಇಳು-ವರಿ ಕಡಿಮೆಯಾಗುತ್ತದೆ; ತಡವಾಗಿ ಕಟಾವು ಮಾಡಿದರೆ ಬತ್ತ ಕ ಟಾ ವಿ ನ ಲ್ಲಿ ಉದುರಿ ನಷ್ಟವುಂಟಾಗುತ್ತದೆ.

## ಒಕ್ಕುವುದು ಯಾವಾಗ ?

ಕಟಾವಿನ ಬಳಿಕ ಅಂದೇ ಅಥವಾ ಮರುದಿನವೇ ಸ್ವಚ್ಛವಾದ ಕಣಕ್ಕೆ ಬೆಳೆ-ಯನ್ನು ವರ್ಗಾಯಿಸುವುದು ತುಂಬಾ ಉತ್ತಮ. ಈ ರೀತಿ ವರ್ಗಾಯಿಸಿದ ಮೇಲೆ ಒಂದೆರಡು ದಿನ ಒಣಗಲು ಬಿಡಿ. ಒಕ್ಕಲು ಅಥವಾ ತೂರಲು ಯಂತ್ರಗಳನ್ನು ಬಳಸುವುದಾದರೆ ಅವನ್ನು ಚೆನ್ನಾಗಿ ಸ್ವಚ್ಛಗೊಳಿಸಿ ಬಳಸಿ.

## ಬತ್ತವನ್ನು ಎಷ್ಟು ಒಣಗಿಸಬೇಕು ?

ಬತ್ತದ ಉತ್ತಮ ಸಂಗ್ರಹಣೆ ಸಾಮರ್ಥ್ಯ, ಗುಣಮಟ್ಟ ಪೌಷ್ಟಿಕಾಂಶ ಮತ್ತು ಮೊಳಕೆಯೊಡೆಯುವ ಕ್ಷಮತೆ–ಇವು ನಾವು ಬತ್ತವನ್ನು ಎಷ್ಟು ಮ ತ್ತು ಹೇಗೆ



ಒಣಗಿಸುತ್ತೇವೆಂಬುದನ್ನು ಅವಲಂಬಿಸಿವೆ. ಕುಯಿಲಿನ ಸಮಯದಲ್ಲಿ ಬತ್ತದಲ್ಲಿ ಶೇ ೨೦ ರಷ್ಟು ತೇವಾಂಶವಿರುತ್ತದೆ. ಇದನ್ನು ೧೨ ರಿಂದ ೧೪ ಕ್ಕೆ ತರಬೇಕು. ಬತ್ತವನ್ನು ಸಂಗ್ರಹಿಸುವ ಅಥವಾ ಅಕ್ಕಿ ಮಾಡುವ ಮುನ್ನ ಬತ್ತದ ತೇವಾಂಶ ೧೨ ರಿಂದ ೧೪ ರ ವರೆಗೆ ಇರುವುದು ಅವಶ್ಯಕ. ನಮ್ಮ ದೇಶದಲ್ಲಿ ಸೂರ್ಯದೇವನ ಕೃಪಾದೃಷ್ಟಿ ಯತೇಚ್ಛವಾಗಿದೆ. ಬೆಳಗಿನ ೯ರಿಂದ ೧೧ ಗಂಟೆಯವರೆಗೆ ೮ ದಿನ ಬಿಸಿಲಿನಲ್ಲಿ ಒಣಗಿಸುವುದು ಅತ್ಯುತ್ತಮ.

**ಸಂಗ್ರಹಣೆ :—** ಸಂಗ್ರಹಿಸಲು ಅನುಕೂಲತೆಗೆ ತಕ್ಕಂತೆ ಹಲವಾರು ವಿಧಾನಗಳಿವೆ. ಯಾವುದೇ ವಿಧಾನವಿರಲಿ, ಸ್ವಚ್ಛತೆಯ ಬಗ್ಗೆ ಹೆಚ್ಚು ಗಮನ ಕೊಡ ಬೇಕು. ನೆಲದಿಂದ ೨ ಅಡಿ ಎತ್ತರಕ್ಕೆ ಗೋಡೆಗಳಿಂದ ದೂರ ಮರದ ಹಲಗೆಗಳ ಮೇಲೆ ಸಂಗ್ರಹಿಸಿಡಿ. ಹಳೆಯ ಗೋಣಿಚೀಲಗಳಾದರೆ ನೀರಿನಲ್ಲಿ ೧ ಗಂಟೆ ಕುದಿಸಿ ಚೆನ್ನಾಗಿ ಒಣಗಿಸಿ, ಬತ್ತ ತುಂಬಿಡಿ.

**ಔಷಧೋಪಚಾರ :—** ತಿನ್ನಲು ಬಳಸುವುದಾದರೆ ಯಾವ ಔಷಧವು ಒಳ್ಳೆಯದಲ್ಲ. ಬೀಜಕ್ಕಾದರೆ ಶೇ 0.15 ರ ಮೆಲಾಥಿಯನ್, ಶೇ 0.10 ರ ಫೆನೆನ್ ಟ್ರೋಥಿಯನ್, ಮತ್ತು ಶೇ 0.015 ರ ಫೈರಿತ್ರಮ್ ಮದ್ದುಗಳಲ್ಲಿ ಒಂದನ್ನು ೧೦೦ ಕೆ. ಜಿ. ಬತ್ತಕ್ಕೆ ೨ ಲೀಟರ್ ಔಷದಿಯಂತೆ ಬಳಸಬಹುದು. ಗಾಳಿಯಾಡ ದಂತೆ ನಿಗವಹಿಸಬೇಕು.

ಸಂಗ್ರಹಿಸಿದ ಬತ್ತವನ್ನು ಆಗಾಗ್ಗೆ ಪರೀಕ್ಷಿಸಿ. ಅವಶ್ಯಕತೆ ಬಿದ್ದರೆ ಮುಗ್ಗು ವಾಸನೆ ಬಂದರೆ ಗಾಳಿಗೆ ಹರಡಿ ಒಣಗಿಸಿ ಮತ್ತೆ ತುಂಬಿಡಿ, ಬೇವಿನ ಎಲೆಗಳನ್ನು ಸುಟ್ಟು ಹೊಗೆಯನ್ನು ಬತ್ತ ಸಂಗ್ರಹಿಸಿರುವ ಜಾಗದಲ್ಲಿ ತುಂಬಿಕೊಳ್ಳುವಂತೆ ಮಾಡಿ ಕೆಲವು ಸೂಕ್ಷ್ಮಾಣು ಜೀವಿಗಳನ್ನು ನಿಯಂತ್ರಿಸಬಹುದು. ಬೆಳ್ಳುಳ್ಳಿ ರಸದಿಂದ ಮಾಡಿದ ಕೆಲವು ಮದ್ದುಗಳೂ ಕೆಲವು ಕ್ರಿಮಿಕೀಟಗಳನ್ನು ನಾಶಪಡಿಸುತ್ತವೆ.

ನಮ್ಮ ರೈತರು ಬರೀ ಬತ್ತವನ್ನು ಹೆಚ್ಚು ಬೆಳೆದರೆ ಸಾಲದು, ಬೆಳೆದ ಬತ್ತ ವನ್ನು ಚೆನ್ನಾಗಿ ಉಳಿಸಿಕೊಳ್ಳಬೇಕು. ಆಗ ಶ್ರಮ ಸಾರ್ಥಕ, ಬೆಳೆದಿದ್ದಕ್ಕೆ ಹೆಚ್ಚು ಅರ್ಥ.

---

## ಆ ಧು ನಿ ಕ ಚು ಟು ಕ

—ಜೆ. ಶಾರದರಾಜಶೇಖರ್

ಯೋಜನೆಗಳ ಮೇಲೆ ಯೋಜನೆಗಳು ಉರುಳುತಿಹವು
ಭೋಜನಕಿಲ್ಲದೆ ಸಾಯುತಿಹರು ಸಾವಿರಾರು ಜನ
ಮೋಜು ಮಾಡುತಲಿಹರು ರಾಜಕಾರಣಿಗಳು
ಯೋಜನೆಗಳಿಂದ ಯಾರಿಗಾಯ್ತು ಪ್ರಯೋಜನ ?

# ನಟರಾಜ ಮೂರ್ತಿ

—ಯು.ಎಸ್. ಯು.ಎಸ್. ಕೃಷ್ಣರಾವ್

"ಹೆ ನಟರಾಜ; ನೃತ್ಯಕಲೆಯ ರಾಜನೆ–ವಿಶ್ವದ ಇರುವಿಕೆಯ ಆದಿ ಅಂತ್ಯದ
ಪುರುಷನೇ; ಜಗತ್ತಿನ ಎಲ್ಲ ಚಟುವಟಿಕೆಗಳನ್ನು ತನ್ನ ತಾಂಡವ ನೃತ್ಯದಿಂದ ಆಳು
ತ್ತಿರುವ ಶ್ರೇಷ್ಠ ದೇವನೇ–ಈ ಮಾಯಾ ಜಗತ್ತಿನಲ್ಲಿ ಸೃಷ್ಟಿ, ಸ್ಥಿತಿ, ಲಯವೆಂಬ
ಕ್ರಿಯೆಗಳ ವೈವಿಧ್ಯದ ಚಕ್ರವನ್ನು ತಿರುಗಿಸುತ್ತಿರುವ ಆದಿ ದೈವನೇ—ಹೆ ಶಿವ; ಹೆ
ನಟರಾಜ; …….. ಈ ಸ್ಫೂರ್ತಿದಾಯಕ ಹೆಸರು ಜನತೆಯ ಹೃದಯದಲ್ಲಿ ವಿಧವಿಧ
ವಾದ ಚಿತ್ರಗಳನ್ನು ಉಂಟುಮಾಡುತ್ತಿದೆ–ಸಂಗೀತಗಾರರಿಗೂ, ನೃತ್ಯ ಕಲಾವಿದರಿಗೂ
ನಟರಾಜನು, ದಿವ್ಯವಾದ ದೇವಾದಿದೇವ—ಆತನ ಚರಣಾರವಿಂದಗಳಲ್ಲಿ ತಮ್ಮ ಕರೆ
ಯನ್ನು ಅರ್ಪಿತವಾಗಿಡುವರು—ಕವಿಗಳಿಗೂ, ಭಕ್ತರಿಗೂ, ನಟರಾಜನು ತಮ್ಮ
ಭಾವಾವೇಷದ ಮೂಲ; ಕವಿತೆಗಳ ಸರಳವಾದ ಕವಿತಾಧಾರೆಗೆ ಬೇಕಾದ ಅಂದ
ಹಾಗೂ ಘನವಾದ ಸಾಹಿತ್ಯದ ರಚನೆಗೆ ಬೇಕಾದ ಸ್ಫೂರ್ತಿ ಶಿಲ್ಪಿಗೆ, ತನ್ನ ಚಮತ್ಕಾ
ರಿಕ ಕೈಗಳಿಂದ ಕಲ್ಲಿನಲ್ಲಾಗಲೀ, ಮರದಲ್ಲಾಗಲಿ, ಲೋಹದಲ್ಲಾಗಲೀ ಕೆತ್ತಿ ರೂಪಿ
ಸುವ ದಿವ್ಯ ಮೂರ್ತಿ–ಈ ಅಂದವಾದ ನಟರಾಜ ಮೂರ್ತಿಯು ಎಷ್ಟು ಮಹತ್ತಾದ
ಭಾವನೆ ! ಕಲಾ ವಸ್ತುಗಳನ್ನು ಸಂಗ್ರಹಿಸುವ ವ್ಯಕ್ತಿಗೆ ಈ ವಿಗ್ರಹವು ಅಮೂಲ್ಯ
ವಾದ ನಿಧಿ—ಅತನು ಇದನ್ನು ಪಡೆಯಲು ಏನೂ ಮಾಡಬಲ್ಲನು–ತಾಯಿಯಾಗುವ
ಸ್ತ್ರೀಗೆ ತನ್ನ ಹೊಟ್ಟೆಯಲ್ಲಿರುವ ಬಾಲಕನಿಗೆ "ನಟರಾಜ" ಎಂಬ ಹೆಸರನ್ನಿಡುವ ಆಸೆ
–ಆಧುನಿಕ ಸ್ತ್ರೀಗೆ ತನ್ನ ಮನೆಯಲ್ಲಿಡುವಂತಹ ಒಂದು ಸುಂದರವಾದ ಕಲಾವಸ್ತು,
ಸರಕಾರಕ್ಕೆ, ಅಂಚೆ ಚೀಟಿಗೆ, ಬೇಕಾದ ಒಂದು ವಿಷಯ–ಹೌದು-ನಟರಾಜನು ಎಲ್ಲ
ರನ್ನೂ ಸ್ಫೂರ್ತಿಗೊಳಿಸುತ್ತಾನೆ–ಸಾಧಾರಣ ಜನತೆಯಿಂದ–ದಿವ್ಯ ಪುರುಷರಿಗೂ–

ಹಿಂದೂ ದೇವತೆಯರಲ್ಲಿ ನಟರಾಜನು ಶ್ರೇಷ್ಠದೇವತೆ–ಶಿವಪ್ರದೋಷ ಸ್ತೋತ್ರ
ದಲ್ಲಿ ಶಿವನು ಸಂಧ್ಯಾತಾಂಡವವನ್ನು ಮಾಡುವ ವಿಷಯವನ್ನು ಅಮೋಘವಾದ
ವರ್ಣನೆಯಿಂದ ಕೊಟ್ಟಿದ್ದಾರೆ—ಮೂರುಲೋಕದ ಮಾತೆಯಾದ ದಿವ್ಯ ಗೌರಿಯನ್ನು
ಸ್ವರ್ಣಪೀಠದ ಮೇಲೆ ಇರಿಸಿದ ಮೇಲೆ ಶಿವನು ದೇವಾದಿ ದೇವತೆಯರೊಡನೆ ಕೈಲಾ
ಸಕ್ಕೆ ಹೋಗಿ ನರ್ತಿಸುತ್ತಾನೆ - ಸರಸ್ವತಿಯು ವೀಣೆಯನ್ನು ಬಾರಿಸುತ್ತಾಳೆ. ಇಂದ್ರನು
ಕೊಳಲನ್ನು ಊದುತ್ತಾನೆ. ಲಕ್ಷ್ಮಿಯು ಸುಶ್ರಾವ್ಯವಾಗಿ ಹಾಡುತ್ತಾಳೆ–ಬ್ರಹ್ಮ
ದೇವನು ತಾಳವನ್ನು ಬಾರಿಸುತ್ತಿರುವಂತೆ ಶ್ರೀ ವಿಷ್ಣುವು ಮೃದಂಗ ಬಾರಿಸುತ್ತಾನೆ.



ಶಿವನ ಈ ದೈವಿಕ ನೃತ್ಯವನ್ನು ನೋಡುವ ಈ ದೇವಾಧಿದೇವತೆಗಳೂ ಗಂಧರ್ವ
ಯಕ್ಷರೂ ಅಪ್ಸರೆಯರೂ ಸಂತರೂ ಭೂತ ಗಣಗಳೂ ಧನ್ಯರು—

ನಟರಾಜನಿಗೆ ಅರ್ಪಿತವಾದ ಅನೇಕ ದೇವಾಲಯಗಳಿವೆ. ಇವುಗಳಲ್ಲಿ ಮುಖ್ಯ
ವಾದ ದೇವಾಲಯವು ಚಿದಂಬರಂನಲ್ಲಿದೆ ಇಲ್ಲಿ ಹಿಂದೂ ಮಹತ್ವದ ಫಲವಾಗಿ ಕಲ್ಲಿ
ನಲ್ಲಿ ಅಸಂಖ್ಯಾತ ನೃತ್ಯ ವೈವಿಧ್ಯವನ್ನು ಕೆತ್ತಲ್ಪಟ್ಟ ಮಹತ್ತಾದ ಶಿಲ್ಪ ಕಲೆಯನ್ನು
ವ್ಯಕ್ತಪಡಿಸಿದ್ದಾರೆ. ಶಿವನು ತನ್ನ ಭಕ್ತರಾದ ಪತಾಂಜಲಿ ಮತ್ತು ವ್ಯಾಘ್ರಪಾದರನ್ನು
ಇಲ್ಲಿಯೇ ಪರವಶರನ್ನಾಗಿ ಮಾಡಿದುದು. ತನ್ನ ಪತ್ನಿಯಾದ ಕಾಳಿಯನ್ನು ನೃತ್ಯ
ಕಲೆಯ ಸ್ಪರ್ಧೆಯಲ್ಲಿ ಊರ್ಧ್ವ ತಾಂಡವವನ್ನು ಮಾಡಿ ಸೋಲಿಸಿದುದು
ಸಲ್ಲಿಯೇ. ಶಿವನನ್ನು ಅದ್ಭುತವಾದ "ನಾದಂತ" ತಾಂಡವ ಭಂಗಿಯನ್ನು ಪಡೆದ
ಸುಂದರವಾದ ಹಾಗೂ ಅಗಾಧವಾದ ವಿಗ್ರಹವನ್ನು ಪೂಜಿಸುವರು. ನಟರಾಜನ
ಈ ವಿಗ್ರಹವು ಹಿಂದೂ ಆಧ್ಯಾತ್ಮದ ಎಲ್ಲ ಮುಖಗಳನ್ನೂ ಸೂಚಿಸಿ ಅಮರವಾದ
ಆತ್ಮವು ಮಾಯಾಲೋಕಕ್ಕೇ ಸಂಬಂಧಪಟ್ಟ ಸೃಷ್ಟಿ, ಸ್ಥಿತಿ, ಲಯವನ್ನು ತಿಳಿಸುತ್ತದೆ.
ಈ ವಿಗ್ರಹವು ವಿಶ್ವದ ಅಮರವಾದ ಲಯಬದ್ಧ ಚಟುವಟಿಕೆಯ ಸಂಗ್ರಹಣ ಮತ್ತು
ಭಾರತದ ಕಲೆ ಮತ್ತು ನೃತ್ಯದ ಪ್ರತಿಬಿಂಬ ಅಥವಾ ಮೂಲಾಧಾರ.

ಚಿದಂಬರಂ ದೇವಾಲಯದ ಒಳಗಡೆ ಐದು ಸಭೆಗಳು ಇವೆ. (1) ಸಾವಿರ
ಕಂಬಗಳಿರುವ ರಾಜಸಭೆ. (2) ಚಿತ್ ಸಭೆ ಅಥವಾ ಶಿವನ ವಿಗ್ರಹವಿರುವ ಮೋಕ್ಷ
ಪ್ರದವಾದ ಸಭೆ. (3) ನಟರಾಜನ ವಿಗ್ರಹವಿರುವ ಕನಕ ಸಭೆ. (4) ದೇವ ಸಭೆ
ಮತ್ತು ಕೊನೆಯದಾಗಿ (5) ನೃತ್ಯಕಲೆಯ ವಿಧವಿಧವಾದ ಭಂಗಿಗಳ ಭಂಡಾರವಿರುವ
ನೃತ್ಯಸಭೆ. ಶಿವನು ಕಾಳಿಯನ್ನು ಸೋಲಿಸಿದುದು ಈ ನೃತ್ಯ ಸಭೆಯಲ್ಲಿ ಚಿದಂಬ
ರಂನಲ್ಲಿ ಪ್ರಚಾರದಲ್ಲಿರುವ ಕಥೆಯಪ್ರಕಾರ ಮೊದಲು ಅಲ್ಲಿ ಎರಡು ಕ್ಷೇತ್ರಗಳಿದ್ದವು.
ಒಂದು ಶಿವನಿಗೆ ಅರ್ಪಿತವಾದುದು. ಇನ್ನೊಂದು ಕಾಳಿಗೆ ಅರ್ಪಿತವಾದುದು. ಒಮ್ಮೆ
ಶಿವನು ತನ್ನ ಭಕ್ತನೊಬ್ಬನಿಗೆ ತನ್ನ ಕ್ಷೇತ್ರಕ್ಕೆ ಪ್ರವೇಶ ಮಾಡಲು ಅಪ್ಪಣೆ ಕೊಟ್ಟಿ
ದ್ದನು. ಆದರೆ ಕಾಳಿಯು ಆತನಿಗೆ ನೃತ್ಯ ಸಭೆಯನ್ನು ಪ್ರವೇಶಿಸಲು ಅಪ್ಪಣೆ
ಕೊಡಲಿಲ್ಲ. ಈ ನಿರಾಕರಣೆಯಿಂದಾಗಿ ಈ ಎರಡು ದೈವಿಕ ವ್ಯಕ್ತಿಗಳಲ್ಲಿ ಎಂದೂ
ಕಾಣದ ನೃತ್ಯ ಸ್ಪರ್ಧೆಯು ಭಕ್ತರ ಮುಂದೆ ಜರುಗಿತು. ಈ ಸ್ಪರ್ಧೆಯು ಸಮ
ಸಮವಾಗಿ ನಡೆದು ಕಾಳಿಯು ಶಿವನು ನರ್ತಿಸಿದುದೆಲ್ಲವನ್ನೂ ಮಾಡಿದಳು. ಕೊನೆಗೆ
ನಟರಾಜನು ತನ್ನ ಬಲಗಾಲನ್ನು ತಲೆಗೆ ಎತ್ತಿ ಮಹಾತಾಂಡವ ಭಂಗಿಯನ್ನು
ಮಾಡಿದನು. (ನಾಟ್ಯಶಾಸ್ತ್ರದಲ್ಲಿ ಇದನ್ನು ಲಲಾಟ ತಿಲಕ ಭಂಗಿ ಎಂದು ತಿಳಿಸಿ
ದ್ದಾರೆ) ಕಾಳಿಯು ಲಜ್ಜಾ ಪ್ರವೃತ್ತಿಯಿಂದ ಇದನ್ನು ಮಾಡಲಾರದೆ ತನ್ನ ಸೋಲನ್ನು

ಒಪ್ಪಿಕೊಂಡಳು. ಆಮೇಲಿಂದ ಕಾಳಿಯು ಆ ಕ್ಷೇತ್ರವನ್ನು ಬಿಟ್ಟು ಊರಿನಆಚೆ ತನ್ನ ವಾಸವನ್ನು ಕೈ ಕೊಂಡಳು.

ಚಿದಂಬರಂ ದೇವಾಲಯಕ್ಕೆ 4 ದೊಡ್ಡ ಗೋಪುರಗಳಿವೆ. ಈ ಗೋಪುರಗಳ ಗೋಡೆಗಳಲ್ಲಿ ಭರತನು ವರ್ಣಿಸಿದ 108 ಕರಣಗಳನ್ನು ಕ್ರಮ ಪ್ರಕಾರವಾಗಿ ಕೆತ್ತಿ ಸ್ಥಾಪಿಸಿದ್ದಾರೆ. ಇವು ಭರತನಾಟ್ಯ ನೃತ್ಯಕಲೆಯ ಆಧಾರ ಭೂತವಾಗಿವೆ. ಅಂತಹ ಪ್ರವೇಶವು ನಟರಾಜನ ದೇವಾಲಯಕ್ಕೆ ಯೋಗ್ಯವಾದ ವೈಭವವಾಗಿದೆ. ಶಿವಭಕ್ತರಲ್ಲಿ ಶೂದ್ರ, ಪಂಗಡಕ್ಕೆ ಸೇರಿದ ನಂದನಾರ್ ಎಂಬ ದೊಡ್ಡ ಭಕ್ತನೊಬ್ಬ ತನ್ನ ಕೃಷಿಯ ಕೆಲಸವನ್ನು ನಿರಾಕರಿಸಿ ಶಿವನ ದರ್ಶನಕ್ಕಾಗಿ ತನ್ನ ಬಹು ಸಮಯವನ್ನು ಪ್ರಾರ್ಥನೆಯಲ್ಲಿಯೇ ಕಳೆದನು. ಹೊಲಗದ್ದೆಗಳು ನೀರಿಲ್ಲದೆ ಒಣಗಿದವು. ಸ್ವಾಭಾವಿಕವಾಗಿ ಆತನ ಧಣಿಯು ಅಸಮಾಧಾನಪಟ್ಟನು. ಆದರೆ ಶಿವನು ತನ್ನ ಭಕ್ತನ ಪ್ರಾರ್ಥನೆಯನ್ನು ಕೇಳಿದುದರ ಫಲವಾಗಿ ಮರುದಿನ ಹೊಲಗದ್ದೆಯಲ್ಲಿನ ಕೃಷಿಯು ಫಲಭರಿತವಾಗಿತ್ತು. ನಂದನಾರನು ಶಿವನ ಭಕ್ತನೆಂದು ಮನಗಂಡು ಆತನ ಧಣಿಯು ಆತನ ಕ್ಷಮೆ ಕೇಳಿ ಅವನನ್ನು ಚಿದಂಬರಂಗೆ ಕಳುಹಿಸಿಕೊಟ್ಟನು. ಇಲ್ಲಿಯೂ ನಂದನಾರನು ತುಂಬಾ ಕಷ್ಟಪಟ್ಟನು ದೇವಾಲಯದ ಪುರೋಹಿತರು ಅವನಿಗೆ ಒಳಗೆ ಪ್ರವೇಶಕೊಡಲಿಲ್ಲ ಆದರೆ ಶಿವನ ವಾಹನವಾದ ನಂದಿಯು ನಂದನಾರನಿದ್ದೆಡೆಗೆ ಮುಖ ತಿರುಗಿಸಿತು. ನಂದಿಯೊಡನೆ ಶಿವನೂ ಕೂಡ ನಂದನಾರನನ್ನು ಹಿಂಬಾಲಿಸಿದನು. ಮತ್ತು ನಂದನಾರ್ ಶಿವನೊಡನೆ ಐಕ್ಯನಾದನು.

ಚಿದಂಬರಂ ದೇವಾಲಯದ ಕನಕ ಸಭೆಯ ನಟರಾಜನ 'ನಾದಂತ' ವಿಗ್ರಹದ ವಿಷಯವಾಗಿ ಒಂದು ಚಲುವಾದ ಕಥೆಯಿದೆ. ಒಂದಾನೊಂದು ಕಾಲದಲ್ಲಿ ತಾರಾಕಾರಣ್ಯದಲ್ಲಿ ಕೆಲವು ನಾಸ್ತಿಕ ಋಷಿಗಳು ಹೋಮಗಳನ್ನು ಮಾಡಿದ ಫಲವಾಗಿ ಪಡೆದ ತಮ್ಮ ಅಮಾನುಷ ಶಕ್ತಿಯ ದೆಸೆಯಿಂದ ಅತಿಗಾಢ ಅಹಂಭಾವ ದರ್ಪದಿಂದ ಮೆರೆಯುತ್ತಿದ್ದರು. ಅವರ ಹೆಮ್ಮೆಯನ್ನು ಮುರಿಯಲು ಶಿವನು ಒಬ್ಬ ಭಿಕ್ಷುಕನ ವೇಷದಲ್ಲಿ ಅವರಲ್ಲಿಗೆ ಹೋದನು. ಜೊತೆಗೆ ಮಹಾವಿಷ್ಣುವು ಅದ್ವಿತೀಯವಾದ ಚೆಲುವನ್ನು ರೂಪಿಸುವ ಮೋಹಿನಿಯ ವೇಷದಲ್ಲಿ ಹೋದನು. ಶಿವನು ಒಡನೆಯೇ ಋಷಿಗಳೊಡನೆ ವಾಗ್ಯುದ್ಧವನ್ನು ಆರಂಭ ಮಾಡಿದನು. ರೇಗಿಸಲ್ಪಟ್ಟ ಋಷಿಗಳು ಶಿವನನ್ನು ನಾಶ ಮಾಡುವ ಪ್ರಯತ್ನದಲ್ಲಿ ಒಂದು ಕ್ರೂರವಾದ ಹುಲಿಯನ್ನು ರಚಿಸಿ ಶಿವನ ಮೇಲೆ ಬೀಳುವಂತೆ ಮಾಡಿದರು. ಆದರೆ ಶಿವನು ಶಾಂತವಾಗಿ ಆ ಹುಲಿಯನ್ನು ಕೊಂದು ಅದರ ಚರ್ಮವನ್ನು ಹರಿದು ತನ್ನ ಸೊಂಟಕ್ಕೆ ಸುತ್ತಿಕೊಂಡನು. ಋಷಿಗಳು ಭಯಂಕರವಾದ ಸರ್ಪವೊಂದನ್ನು ಸೃಷ್ಟಿಸಿದರು. ಅದನ್ನು ಶಿವನು ತನ್ನ ಕುತ್ತಿಗೆಗೆ ಸುತ್ತಿಕೊಂಡನು. ಋಷಿಗಳು ಮತ್ತೂ ರೋಷದಿಂದ ತಮ್ಮ ಹೋಮ



ಕುಂಡದಿಂದ ಮುಯಲಗನೆ ಎಂಬ ಕೆಟ್ಟ ಕುಳ್ಳ ರಾಕ್ಷಸನನ್ನು ಸೃಷ್ಟಿಸಿದರು. ಆದರೆ ಶಿವನು ಆತನನ್ನು ನೆಲಕ್ಕೆ ಹಾಕಿ ನಗುತ್ತ ಆತನ ಬೆನ್ನಮೇಲೆ ತನ್ನ ತಾಂಡವ ನೃತ್ಯವನ್ನು ನರ್ತಿಸಿದನು. ಇದನ್ನು ನೋಡಿ ನಮ್ರರಾದ ಋಷಿಗಳು ಶಿವನ ಚರಣಗಳ ಮೇಲೆ ಬಿದ್ದು ಕ್ಷಮಾಪಣೆಯನ್ನು ಬೇಡಿದರು ಈ ಅದ್ಭುತವಾದ ಶಿವನ ನೃತ್ಯದ ವಿಚಾರವನ್ನು ಕೇಳಿ ಆದಿಶೇಷನು ಅದನ್ನು ನೋಡಲು ಬಯಸಿ ಶಿವನನ್ನು ಪ್ರಾರ್ಥಿಸಿದನು. ಆಗ ಶಿವನು ತನ್ನ ನೃತ್ಯವನ್ನು ತಿಲ್ಲೈಯಲ್ಲಿನ ಕನಕಸಭೆಯಲ್ಲಿ ನೋಡಬಹುದಾಗಿ ಆದಿಶೇಷನಿಗೆ ತಿಳಿಸಿದನು. ಶೈವ ಸಾಹಿತ್ಯದಲ್ಲಿ ಭವ್ಯವಾಗಿ ಬರೆದಿರುವ ಕವಿತೆಗಳಲ್ಲಿ ಈ ನಾದಂತ ಭಂಗಿಯನ್ನು ವ ...ಸಿದ್ದಾರೆ. ಇದೇ ವಿಗ್ರಹವನ್ನು ನಾವು ಚಿದಂಬರಂನಲ್ಲಿ ಕಾಣಬಹುದು

ಈ ವಿಗ್ರಹವು ಶಿವನ ಪಂಚಕ್ರಿಯೆಗಳನ್ನು ಸೂಚಿಸುತ್ತದೆ. 1) ಸೃಷ್ಟಿ ಅಥವಾ ಬ್ರಹ್ಮನು ನಿರೂಪಿಸಿರುವ ಸೃಷ್ಟಿ 2) ಸ್ಥಿತಿ ಅಥವಾ ವಿಷ್ಣುವು ಪ್ರತಿನಿಧಿಸುವ ಸ್ಥಿತಿ 3) ಸಂಹಾರ ಅಥವಾ ರುದ್ರನು ತೋರಿಸುವ ಸಂಹಾರದ ಸೂಚನೆ 4) ತಿರೋಭಾವ ಅಥವಾ ಮಹೇಶ್ವರನು ನಿರೂಪಿಸುವ ಮಾಯೆ. 5) ಅನುಗ್ರಹ ಅಥವಾ ಸದಾಶಿವನು ಸೂಚಿಸುವ ಮೋಕ್ಷ. ಶಿವನ ಬಲಗೈಯಲ್ಲಿರುವ ಡಮರು ಸೃಷ್ಟಿಯನ್ನು ಸೂಚಿಸುತ್ತದೆ. ಎರಡನೇ ಬಲಗೈ ಅಭಯಹಸ್ತವಾಗಿದ್ದು ಸ್ಥಿತಿಯನ್ನು ಸೂಚಿಸುತ್ತದೆ. ಎಡಗೈಯಲ್ಲಿರುವ ಅಗ್ನಿಯು ಸಂಹಾರವನ್ನು ಸೂಚಿಸುತ್ತದೆ. ಶಾಂತವಾದ ದೃಷ್ಟಿಯಿಂದ ಕೂಡಿದ ಇಡೀ ವಿಗ್ರಹವು ದೃಢವಾದ ಬಲಗಾಲಮೇಲಿದ್ದು ಮಾಯೆಯನ್ನು ಸೂಚಿಸುತ್ತದೆ. ಎತ್ತಿರುವ ಎಡಗಾಲು ಅನುಗ್ರಹ ಅಥವಾ ಮೋಕ್ಷವನ್ನು ಸೂಚಿಸುತ್ತದೆ. ಈ ಪಂಚಕ್ರಿಯೆಗಳಲ್ಲದೆ ಶಿವನ ಈ ನಾದಾಂತ ವಿಗ್ರಹದ ಇತರ ಭಾಗಗಳನ್ನು ಹಲವರು ಹಲವು ವಿಧವಾಗಿ ವರ್ಣಿಸುತ್ತಾರೆ. ಆದರೆ ಸಾಮಾನ್ಯವಾದ ನಿರೂಪಣೆಗಳು ಯಾವುವೆಂದರೆ ಮುಯಲಗನೆ ರಾಕ್ಷಸನು ಶಿವನಿಂದ ಸುಳಿಯಲ್ಪಟ್ಟ ಅಧರ್ಮ ಶಿವನ ಕೂದಲು ಜೀವದ ಅಮರವಾದ ಚಲನೆ–ಸುತ್ತಲ್ಪಟ್ಟ ಸರ್ಪಗಳು ಅಪಾಯಕರವಾಗಿಲ್ಲದ ಜೀವನದಲ್ಲಿನ ಆತಂಕಗಳು. ಬಲಗಿವಿಯಲ್ಲಿನ ಪುರುಷನ ಒಡವೆ ಎಡಗಿವಿಯಲ್ಲಿನ ಸ್ತ್ರೀಯ ಬೆಂಡೋಲೆ ಸೃಷ್ಟಿ ನಿರ್ಮಾಣದಲ್ಲಿ ಸ್ತ್ರೀ ಪುರುಷರ ವ್ಯಕ್ತಿತ್ವ. ಬೆಳಗುತ್ತಿರುವ ಅರ್ಧ ಚಂದ್ರ ಜೀವನದಲ್ಲಿನ ಒಳ್ಳೇತನ ಮತ್ತು ವಿವೇಕವನ್ನು ಸೂಚಿಸುತ್ತದೆ ನಟರಾಜನ ಪ್ರಸಿದ್ಧತೆ ದೈವಿಕ ಹಾಗು ಗಂಭೀರ.

ಈಗ ನಾವು ನಟರಾಜನ ಅಂದವಾದ "ನಾದಂತ" ಭಂಗಿಯನ್ನು ಸೂಕ್ಷ್ಮವಾಗಿ ಪರೀಕ್ಷಿಸೋಣ. ದೇವಾಲಯಗಳಲ್ಲಿ ವಸ್ತು ಭಂಡಾರಗಳಲ್ಲಿ ಕಲಾ ಸಂಗ್ರಹಗಳಲ್ಲಿ ಇರುವ ನಾವು ಕಾಣುವ ಹಲವು ವಿಗ್ರಹಗಳಲ್ಲಿ ಕೆಲವು ಸಣ್ಣ ಪುಟ್ಟ ಭೇದಭಾವಗಳು ಇದ್ದರೂ ಮುಖ್ಯವಾದ ಲಕ್ಷಣಗಳು ಎಲ್ಲದರಲ್ಲೂ ಒಂದೇಯಾಗಿದೆ.

ಶಿವನು ನಟರಾಜನಾಗಿ ತಾಂಡವ ನರ್ತಕನಾಗಿ ಪ್ರೇಕ್ಷಕನ ಮುಂದೆ ತನ್ನ ವನ್ನು ಎದುರಿಸಿ ನಿಂತಿದ್ದಾನೆ. ಅವನಿಗೆ ನಾಲ್ಕು ಕೈಗಳಿದ್ದು ತಲೆಗೆ ಪ್ರಾಯವಾಗಿ ಜಡೆಯೂ ಮುಕುಟವೂ ಇವೆ. ಆತನ ಕೂದಲಿನಲ್ಲಿ ಸರ್ಪವೂ ಗಂಗಾಜಲವೂ ಅರ್ಧ ಚಂದ್ರವೂ ಇವೆ. ಆತನು ಪುರುಷ ಬಲಗ ಓಲೆಯನ್ನೂ ಸ್ತ್ರೀಯ ಎಡಗಿವಿಯ ಓಲೆಯನ್ನೂ ಧರಿಸಿದ್ದಾನೆ. ಸೊಂಟಕ್ಕೆ ಚಿಕ್ಕ ದಾಗಿ ಸುತ್ತಿರುವ ಹುಲಿ ಚರ್ಮವನ್ನೋ ಆನೆ ಚರ್ಮವನ್ನೋ ಸುತ್ತಿಕೊಂಡಿದ್ದಾನೆ. ಎದೆಗೆ ಪವಿತ್ರ ಯಜ್ಞೋಪವೀತವಿದೆ. ಹಾಗೂ ಹಾರಾಡುವ ವಸ್ತ್ರವೊಂದಿದೆ. ಒಂದು ಬಲಗೈ ಢಮರನ್ನು ಇನ್ನೊಂದು ಬಲಗೈ ಅಭಯವನ್ನೂ ಸೂಚಿಸುತ್ತವೆ. ಮುಯಲ ಗನ್ ರಾಕ್ಷಸನ ತಲೆಯು ಸರ್ಪದಿಂದಕೂಡಿದ್ದು ಅತಿ ವೇದನೆಯಿಂದ ಮೇಲಕ್ಕೆತ್ತಿದೆ. ಶಿವನ ಬಲಗಾಲು ರಾಕ್ಷಸನ ಬೆನ್ನಮುಟ್ಟಿದೆ ಶಿವನ ಎಡಗಾಲು ಮೇಲಕ್ಕೆತ್ತಲ್ಪಟ್ಟಿದೆ. ಇವೆಲ್ಲ ಕಮಲದಂತೆ ಇರುವ ವರ್ತುಲಾಕಾರದ ಸ್ಥಾನದಮೇಲೆ ರಚಿಸಲ್ಪಟ್ಟಿದೆ. ಸುತ್ತಲೂ ಅಗ್ನಿಯ ನಾಲಿಗೆಗಳಿಂದ ಅಲಂಕರಿತವಾಗಿದೆ. ಈ ಪ್ರಭಾವ ಮಂಡಲಕ್ಕೆ ಆರು ಕೊನೆಗಳು ತಗಲಿವೆ ಅವು-ಶಿವನ ಬಲಗಾಲು ಮತ್ತು ಎತ್ತಿದ ಎಡಗಾಲು ಮತ್ತು ಡಮರುವನ್ನು ಹಿಡಿದ ಬಲಗೈ ಇನ್ನು ಮೂರು-ಮುಕುಟದ ತುದಿ, ಅಗ್ನಿ ಯಿರುವ ಎಡಗೈ, ಹಾರಾಡುತ್ತಿರುವ ವಸ್ತ್ರದ ಕೊನೆ ಇವು ಆರು ಕೊನೆಗಳಿರುವ ನಕ್ಷತ್ರದ ಅಕಾರದಲ್ಲಿ ಪ್ರಭಾ ಮಂಡಲವನ್ನು ಸೋಂಕುತ್ತಿವೆ. ಕೆಲವು ವಿಗ್ರಹ ಗಳಲ್ಲಿ ಈ ಹಾರಾಡುವ ವಸ್ತ್ರವಿರುವುದಿಲ್ಲ. ಶಿವನ ಈ 'ನಾದಂತ' ವಿಗ್ರಹವು ಮಾಯಾಪ್ರಪಂಚವನ್ನು ಸೂಚಿಸುತ್ತದೆ—ಚಮತ್ಕಾರಿಕ ಹಾಗೂ ಲೌಕಿಕ ಮಾಯಾ ಪ್ರಪಂಚದ ಎಂತಹ ಅಮೋಘವಾದ ಕಲ್ಪನೆ; ಎಂತಹ ಅಗಾಧವಾದ ಕಲಾಸೃಷ್ಟಿ ಆದರೂ ಈ ಮಹಾ ವಿಗ್ರಹವನ್ನು ಕಲ್ಪಿಸಿ ಕೆತ್ತಿರುವ ಶಿಲ್ಪಿಯ ವಿಷಯವಾಗಿ ನಾವು ಒಂದೂ ತಿಳಿಯೆವು.

ಶೈವ ಸಾಹಿತ್ಯದ ಅನೇಕ ಆಧಾರಗಳ ಮೇಲೆ ನಾವು 7 ತಾಂಡವಗಳ ವರ್ಣನೆ ಗಳನ್ನು ತಿಳಿಯುತ್ತೇವೆ. ಅವು:—

1) **ಆನಂದ ತಾಂಡವ:**—ಅಥವಾ ಮೇಲೆ ಹೇಳಿರುವ 'ನಾದಂತ' ಭಂಗಿ.

2) **ಸಂಧ್ಯಾ ತಾಂಡವ:**—ಶಿವನು ಅಶ್ವತ್ಥ ವೃಕ್ಷದ ಕೆಳಗೆ ಮಾಡುವ ತಾಂಡವ.

ಈ ವಿಗ್ರಹದಲ್ಲಿ 4 ಕೈಗಳಿವೆ. ಬಲಗೈಗಳಲ್ಲಿ ಒಂದು ಅಭಯ ಹಸ್ತ ಇನ್ನೊಂದರಲ್ಲಿ ಡಮರು—2 ಎಡಹಸ್ತಗಳು—ವಿಸ್ಮಯ ಮತ್ತು ಬರ್ಹಿಪಿಂಛ ಇಲ್ಲಿ ಮುಯಲಗನ್ ರಾಕ್ಷಸನಲ್ಲ.

3) **ಉಮಾ ತಾಂಡವ:**—ಈ ವಿಗ್ರಹದಲ್ಲಿ ಶಿವನಿಗೆ 6 ಕೈಗಳಿವೆ. 3 ಬಲಗೈಗಳು ಡಮರು ತ್ರಿಶೂಲ ಮತ್ತು ಅಭಯ ತೋರಿಸುತ್ತವೆ. 3 ಎಡಗೈಗಳು,



ವಿಸ್ಮಯ, ಪಿಂಛ ಮತ್ತು ಗಜಹಸ್ತಗಳನ್ನು ತೋರಿಸುತ್ತವೆ. ಎಡಗಾಲು ಮುಯಲ ಗನ್ ರಾಕ್ಷಸನ ಬೆನ್ನಮೇಲಿದೆ. ಬಲಗಾಲು 'ಊರ್ಧ್ವ ಪಾದ' ವಾಗಿದೆ. ಶಿವನ ಎಡ ಪಕ್ಕದಲ್ಲಿ ಉಮೆಯು ತ್ರಿಭಂಗಿಯಲ್ಲಿದ್ದಾಳೆ.

4) **ಗೌರಿ ತಾಂಡವ :** ಇದು ಸಾಮಾನ್ಯವಾಗಿ ಉಮಾ ತಾಂಡವದಂತೆಯೇ ಇದೆ. ಆದರೆ ಎಡಗೈಯು ಸರ್ಪವನ್ನು ಹಿಡಿದಿದೆ. ಬಲಗಡೆಯಲ್ಲಿ ನಂದಿಯಿದೆ. ಎಡಗಡೆಯಲ್ಲಿ ಗೌರಿಯಿದ್ದಾಳೆ.

5) **ಕಾಲಿಕಾ ತಾಂಡವ :** ಇದರಲ್ಲಿ ಶಿವನಿಗೆ 8 ಕೈಗಳು. ಒಂದು ಬಲಗೈ ಅಭಯ ಹಸ್ತ ಒಂದು ಎಡಗೈ ಗಜಹಸ್ತ ಮತ್ತು ಮೂರು ಬಲಗೈಗಳು ಡಮರು ತ್ರಿಶೂಲ ಪಾಶವನ್ನು ಹಿಡಿದಿವೆ. ಮತ್ತು ಮೂರು ಎಡಗೈಗಳು ಕಪಾಲ ಬೆಂಕಿ ಮತ್ತು ಗಂಟೆಯನ್ನು ಹಿಡಿದಿವೆ.

6) **ತ್ರಿಪುರ ತಾಂಡವ :** ಇದರಲ್ಲಿ ಶಿವನಿಗೆ 16 ಕೈಗಳಿವೆ. ಬಲಗೈ ಅಭಯ ವನ್ನು ಒಂದು ಎಡಗೈ ಗಜಹಸ್ತವನ್ನು ತೋರಿಸುತ್ತವೆ. ಉಳಿದ ಏಳು ಬಲಗೈಗಳು ಡಮರು, ತ್ರಿಶೂಲ, ಪಾಶ, ವಜ್ರ, ಟಂಕ, ದಂಡ ಮತ್ತು ನಾಗವನ್ನು ಹಿಡಿದಿವೆ. ಉಳಿದ 7 ಎಡಗೈಗಳು ಬೆಂಕಿ, ಮಿಥುನ ಅಥವಾ ಎರಡು ಪಕ್ಕಗಳಿರುವ ಡಮರು, ವಲಯ, ಗಂಟೆ, ಖಟಕ, ಖಡ್ಗ ಮತ್ತು ಪತಾಕವನ್ನು ಹಿಡಿದಿವೆ. ಶಿವನ 'ಎಡಗಡೆ' ಪಾರ್ವತಿಯು ವಿಸ್ಮಿತಳಾಗಿ ಪ್ರೇಮಾನಂದದಿಂದ ಪತಿಯ ನೃತ್ಯವನ್ನು ನೋಡುತ್ತಿದ್ದಾಳೆ ಅವಳ ಎಡಗೈಯಲ್ಲಿ ಬಾಲಸ್ಕಂದನು ತಾಯಿಯ ಎದೆಯನ್ನು ಹಿಡಿದು ತಂದೆಯ ತಾಂಡವ ನೃತ್ಯವನ್ನು ಭಯದಿಂದ ನೋಡುತ್ತಿದ್ದಾನೆ.

7) **ಸಂಹಾರ ತಾಂಡವ :—** ಇದರಲ್ಲಿ ಶಿವನಿಗೆ 8 ಕೈಗಳಿವೆ ಬಲಗೈ ಒಂದು ಅಭಯಹಸ್ತ. ಎಡಗೈ ಗಜಹಸ್ತ. ಉಳಿದ ಮೂರು ಬಲಗೈಗಳು ತ್ರಿಶೂಲ, ಪಾಶ ಮತ್ತು ಡಮರನ್ನು ಉಳಿದ ಮೂರು ಎಡಗೈಗಳು ಕಪಾಲ, ಡಮರು ಮತ್ತು ವಿಸ್ಮಯವನ್ನೂ ಸೂಚಿಸುತ್ತದೆ. ಎಡಗಾಲು ರಾಕ್ಷಸನ ಮೆಲಿದ್ದು ಬಲ ಗಾಲು ಮೇಲಕ್ಕೆತ್ತಲ್ಪಟ್ಟಿದೆ.

ಆಗಸ್ತ್ಯನು ಬರೆದ " ಭರತ ಸೂತ್ರ " ಎಂಬ ಗ್ರಂಥದಲ್ಲಿ 108 ವಿಧದ ಶಿವತಾಂಡವಗಳು ಸೂಚಿಸಲ್ಪಟ್ಟಿವೆ. ಅವುಗಳಲ್ಲಿ 12 ಮುಖ್ಯವಾದುವು. ಅವು ಯಾವುವೆಂದರೆ:-

1) ಆನಂದ ತಾಂಡವ :- ಮೂರು ಲೋಕಗಳ ಸೃಷ್ಟಿ-ಜೀವಸೃಷ್ಟಿಯನ್ನೂ ಮಾಡಿದಾಗ ನರ್ತಿಸಿದ ನೃತ್ಯ ಇದು " ಜಾತಿ ನಾಂಟ್ಯಂ " ನಲ್ಲಿದೆ.

2) ಸಂಧ್ಯಾ ತಾಂಡವ :- ಬೇರೆ ಬೇರೆ ವಿಧದ ಸಂಗೀತ ವಾದ್ಯಗಳನ್ನು ಸೃಷ್ಟಿಸು ವುದಕ್ಕೋಸ್ಕರ ಶಿವನು ಮಾಡಿದ ನೃತ್ಯ. ಇದರ ಮೂಲವು " ಗೀತಾ ನಾಟ್ಯಂ " ನಲ್ಲಿದೆ.

3) ಶೃಂಗಾರ ತಾಂಡವ :– ಪಾರ್ವತಿಯು ನವರಸಗಳನ್ನು ಜ್ಯೋತಿರ್ಶಾಸ್ತ್ರವನ್ನೂ ಪ್ರಕಟಿಸುವಾಗ ಮಾಡುವ ನೃತ್ಯ.

4) ತ್ರಿಪುರ ತಾಂಡವ :– ಈ ನೃತ್ಯದಲ್ಲಿ ಶಿವನು ಭೂಮಿಯನ್ನೂ ಆಕಾಶವನ್ನೂ ತನ್ನದಾಗಿ ಮಾಡಿ ತ್ರಿಪುರಾಸುರನಿಗೋಸ್ಕರ ಮಾಡುವ ನೃತ್ಯ ಇದು " ಬರಣ ನಾಟ್ಯಂ" ನಲ್ಲಿದೆ.

5) ಊರ್ಧ್ವ ತಾಂಡವ :– ಇದು " ಚಿತ್ರ ನಾಟ್ಯಂ " ನಲ್ಲಿದೆ.

6) ಮುನಿ ತಾಂಡವ :– ಪತಾಂಜಲಿಯ ಕಾಲು ಹೆಜ್ಜೆಯ ತಾಳಕ್ಕೆ ಚಿದಂಬರಂನಲ್ಲಿ ಮಾಡಿದ ನೃತ್ಯ. ಇದನ್ನು " ಲಾಸ್ಯ ನಾಟ್ಯಂ " ನಲ್ಲಿ ಕಾಣಬಹುದು.

7) ಸಹಾರ ತಾಂಡವ :– ಮಾರ್ಕಂಡೇಯನನ್ನು ಯಮನಿಂದ ರಕ್ಷಿಸಲು ಶಿವನು ಮಾಡಿದ ನೃತ್ಯ.

8) ಉಗ್ರವ ತಾಂಡವ :– ಶಿವನು ಭಕ್ತರನ್ನು ಕಾಪಾಡಲು ಹಾಗೂ ಗಜಾಸುರ ನಿಗೊಸ್ಕರ ಮಾಡಿದ ನೃತ್ಯ. ಇದರ ಮೂಲ" ರಾಜ್ಯ ನಾಟ್ಯಂ "ನಲ್ಲಿದೆ.

9) ಭೂತ ತಾಂಡವ :- ಶಿವನು ತನ್ನ ವಸ್ತ್ರಗಳನ್ನು ತೆಗೆದು ಪ್ರಾಣಿಯ ಚರ್ಮ ವನ್ನು ಉಟ್ಟುಕೊಳ್ಳುವಾಗ ಮಾಡುವ ನೃತ್ಯ ಇದನ್ನು" ಪಟ್ಪಾಸ ನಾಟ್ಯಂ " ನಲ್ಲಿ ಕಾಣಬಹುದು.

10) ಪ್ರಳಯ ತಾಂಡವ :- ಪ್ರಳಯಕಾಲದಲ್ಲಿ ಮಾಡುವ ನೃತ್ಯ.

11) ಭುಜಂಗ ತಾಂಡವ :– ಅಮೃತ ಮಂಥನದ ಸಮಯದಲ್ಲಿ ವಿಷವೇರಲುಶಿವನು ಅದನ್ನು ಕುಡಿದಾಗ ಮಾಡಿದ ನೃತ್ಯ. ಇದು " ಪಿಥ ನಾಟ್ಯಂ " ನಲ್ಲಿದೆ.

12) ಶುದ್ಧ ತಾಂಡವ :– ಶಿವನು ಋಷಿಗಳ ಸಾಮಿಪ್ಯದಲ್ಲಿ ಮಾಡಿದ ನೃತ್ಯ. ಇದನ್ನು " ಪಾದಚಾರಿ ನಾಟ್ಯಂ " ನಲ್ಲಿ ಕಾಣಬಹುದು.

ಶಿವನು ಲಯ ಮತ್ತು ತಾಂಡವದ ಅಧಿದೇವತೆ. ಆತನು ಕನಕಸಭೆಯಲ್ಲಿ ಕುಣಿಯುವುದಲ್ಲದೆ ಸ್ಮಶಾನದ ರುದ್ರ ಭೂಮಿಯಲ್ಲೂ ನರ್ತಿಸುತ್ತಾನೆ. ಇಂತಹ ರುದ್ರಭೂಮಿ ಜಗತ್ತಿನಲ್ಲಿ ಎಲ್ಲಿದೆ? ಅದು ನಿಸ್ವಾರ್ಥಿಯಾದ ಭಕ್ತನ ಹೃದಯವೇ ಆಗಿದೆ. ಮಾನವನ ಎಲ್ಲ ಸ್ವಾರ್ಥವನ್ನೂ ಅಹಂಕಾರವನ್ನೂ ನಶ್ವರವಾದ ವಿಷಯಾ ಸಕ್ತಿಗಳನ್ನೂ ಶಿವನು ಧ್ವಂಸಮಾಡಿ ಅವನ ಹೃದಯವನ್ನೂ ಮನಸ್ಸನ್ನೂ ಸತ್ಯದ ಆಸರೆಯನ್ನಾಗಿ ಮಾಡುತ್ತಾನೆ. ಆದ್ದರಿಂದ ಶಿವನ ತಾಂಡವ ನೃತ್ಯಕ್ಕೂ ರುದ್ರ ಭೂಮಿಯಲ್ಲಿನ ಭಯಂಕರವಾದ ನೃತ್ಯಕ್ಕೂ ಯಾವ ಭೇದವೂ ಇಲ್ಲ. ನಟರಾಜನು ಸತ್ಯದ ಮೂರ್ತಿಯಾದರೆ ಪ್ರೇಮದ ಮೂರ್ತಿಯೂ ಆಗಿರುವನು; ಏಕೆಂದರೆ ಅವನ ಅಂತ್ಯದ ಅನುಗ್ರಹವೆಂದರೆ ನರಳುತ್ತಿರುವ ಆತ್ಮಗಳಿಗೆ ಮೋಕ್ಷ ಮಾರ್ಗವನ್ನು ತೋರಿಸುವುದು. ಆತನು ಮಾನವನನ್ನು ಬಂಧನದಿಂದ ಪಾರು ಮಾಡುತ್ತಾನೆ.



# ‘ಸ್ಫೂರ್ತಿ ಜ್ಯೋತಿ’

ಜ್ಞಾನದ ಗುರಿ ಜ್ಞಾನವೇ ಹೊರತು ; ಹಣವಾಗಲೀ, ಯಶಸ್ಸಾಗಲೀ ಅಲ್ಲ.

**—ಸ್ವಾಮಿವಿವೇಕಾನಂದ.**

ಅರ್ಚಕರು ದೇವಾಲಯಕ್ಕೆ ಹತ್ತಿರವಿದ್ದಷ್ಟೂ ದೇವರಿಗೆ ದೂರ.

**—ಜಾನ್ ಹೇವೂರ್**

ಸರಿಯಾದ ರೀತಿಯಲ್ಲಿ ಉಪಯೋಗಿಸದಿದ್ದರೆ, ಒಳ್ಳೆಯ ಗುಣವೇ ಕೆಲವುಬಾರಿ ಕೆಟ್ಟದ್ದಾಗುತ್ತದೆ. **—ಷೇಕ್ಸ್‌ಪಿಯರ್**

ಮನೋವಿಕಾರಕ್ಕೆ ಕಾರಣಗಳಿದ್ದರೂ ವಿಕಾರಗಳಿಗೆ ವಶರಾಗದಿರುವವರೇ ಧೀರರು.

**—ಕಾಳಿದಾಸ**

ಕೆಲಸಕ್ಕೆ ಸಮನಾದ ಬಂಧುವಿಲ್ಲ. ಕೆಲಸಮಾಡುತ್ತಿರುವವನು ಎಂದೂ ಕೆಡುವುದಿಲ್ಲ.

**—ಸುಭಾಷಿತ**

ವಿಚಾರಮಾಡದೆ ಮಾತನಾಡುವುದು ಗುರಿಯನ್ನಿಡದೆ ಬಿಟ್ಟ ಬಾಣದಂತೆ

**—ಆಂಗ್ಲ ಗಾದೆ**

ಒಬ್ಬ ಮನುಷ್ಯನನ್ನು ದೈವೀಕರಿಸುವವು ಮೂರು ಸಾಧನಗಳು : ಪ್ರಾರ್ಥನೆ, ಚಿಂತನೆ ಮತ್ತು ಕಷ್ಟಗಳು. **—ಪ್ರಾಂಕ್ಲಿನ್**

ಮಹಾತ್ಮನಾಗುವ ಭಾಗ್ಯ ಎಲ್ಲರಿಗೂ ಇಲ್ಲ. **—ಡ್ರೈಡನ್**

ಇತರರಾಡಿಕೊಳ್ಳುವ ನಿಂದೆಯ ಮಾತುಗಳನ್ನು ಯಾವನು ಲಕ್ಷಿಸುವುದಿಲ್ಲವೋ ಅಂಥವನು ಜಗತ್ತನ್ನೆ ಜಯಿಸಲು ಸಮರ್ಥನಾಗುತ್ತಾನೆ. **—ಮಹಾಭಾರತ**

ಅರಸರ ಮನೆಯಲಿ ಅರಸಿಯಾಗಿಪ್ಪುದಕಿಂತ ಭಕ್ತರ ಮನೆಯಲಿ ತೊತ್ತಾಗಿಪ್ಪುದು ಕರಲೇಸಯ್ಯ. **—ಬಸವಣ್ಣ**

ಗುರಿಯಿಲ್ಲದ ಜೀವನ ಒರೆಯಿಲ್ಲದ ಕತ್ತಿಯಂತೆ. **—ಜನಪದ ಗಾದೆ**

---

ಅಂತಹ ನಟರಾಜನನ್ನು ಎಲ್ಲ ಕಲೆಗಾರರೂ ಭಕ್ತಿಯಿಂದ ಗೌರವದಿಂದ ಪೂಜಿಸುತ್ತಾರೆ. ನಟರಾಜನ ಅನುಗ್ರಹವನ್ನು ಪಡೆಯಲು ಕಲೆಗಾರರು ಸ್ವಾರ್ಥ ತ್ಯಾಗವನ್ನು ಮಾಡಿ ಅಸೂಯೆ, ಕ್ರೋಧ, ಮಧ ಮೊದಲಾದ ಮಾನವನ ಷಡ್ವೈರಿಗಳನ್ನು ಗೆದ್ದು ಬಿಡಬೇಕು. ಇಂತಹ ನಿರ್ಮಲ ಆತ್ಮಗಳು ಮೋಕ್ಷವನ್ನು ಪಡೆದು ವಿಶ್ವವ್ಯಾಪ್ತವಾದ ನಟರಾಜನ ವರಕ್ಕೆ ಪಾತ್ರರಾಗುತ್ತಾರೆ. ●



ಕಾ
ವ್ಯ
ವಾ
ಹಿ
ನಿ

## ' ಪಾ ರಿ ಜಾ ತ ಕ್ಕೆ '

— ಕೆ. ಜಿ. ರಂಗಯ್ಯ

ನಿನ್ನ ಜೀವನ ವೆನಿತು
ಕ್ಷಣಿಕವಿದ ನಾವರಿತು
ದುಃಖಿಸುವೆವೆಲೆ ಚೆಲುವೆ ಪಾರಿಜಾತ !
ಅರುಣನುದಯ ವಿದಿನ್ನು
ರವಿಯೆಲ್ಲಿ ಬಂದಿಹನು ?
ಮಧ್ಯಾಹ್ನವಲ್ಲವಿದು ಸುಪ್ರಭಾತ.

ನಿಲ್ಲು ನಿಲ್ಲೆಲೆ ಕುಸುಮ
ಅವಸರದೊಳೋಡುತಿಹ
ದಿವಸವಿದು ಮುಂಬರಿದು ಸಂಜೆ ಬರಲಿ
ಸಂಜೆಗೆಲ್ಲರು ಕಲೆತು
ಆ ದೇವನನು ನೆನೆದು
ನಿನ್ನೊಡನೆ ನಮ್ಮದೂ ಪಯಣವಿರಲಿ.

ನಿಲ್ಲಲೀ ಲೋಕದಲಿ
ನಿನಗಿರುವ ರೀತಿಯಲಿ
ನಮಗಿರುವ ಸಮಯವೂ ಅಲ್ಪ ಸ್ವಲ್ಪ.
ಋತುವಸಂತನು ಮೊಟಕು
ನಿನ್ನಂತೆಯೇ ಬೇಗ
ಬೆಳೆದು ನಶಿಸುವುದೆಮ್ಮ ಕಾಯಕಲ್ಪ.

ನೀನೊಣಗಿ ನಶಿಸುವೊಲು
ನಾವು ಸಹ ಸಾಯುವೆವು
ಕ್ಷಣಿಕ ಬಾಳಿಕ ಗುರುತನುಳಿಸದಂತೆ.
ಬೇಸಿಗೆಯ ಮಳೆ ಅಥವ
ಬೆಳಗಿನಿಬ್ಬನಿ ಹನಿಯ
ಮುತ್ತುಗಳು ಮತ್ತೊಮ್ಮೆ ಕಾಣದಂತೆ.

[ಸ್ಫೂರ್ತಿ :— ರಾಬರ್ಟ್ ಹೆರಿಕ್ ಕವಿಯ ' To Daffodils ' ಕಾವಿತೆ]





## ''ವಿಜಯನಗರ ಸ್ಥಾಪನೆಯಲ್ಲಿ ಲಿಂಗಧರ್ಮದ ಪಾತ್ರ''

—ವೇದ ವೇದಾಂತ ವಿದ್ಯಾವಾಚಸ್ಪತಿ ದಿ|| ಶ್ರೀ ಟಿ. ಎಸ್. ಮಲ್ಲಪ್ಪ

ಬೆಟ್ಟದಲ್ಲಿ ಕೊರೆದ ದೇವಸ್ಥಾನಗಳಿಗೆ ಪ್ರಸಿದ್ಧನಾದ ಪರಮ ಮಹೇಶ್ವರರ ಮಹೇಂದ್ರ ವರ್ಮನಿಗೂ ಕಂಚಿಯ ಐರಾವತೇಶ್ವರ ದೇವಸ್ಥಾನವನ್ನೂ ಕೈಲಾಸೇಶ್ವರ ದೇವಸ್ಥಾನವನ್ನೂ ಕಟ್ಟಿಸಿದ ಪಲ್ಲವ ಚಕ್ರವರ್ತಿ ರಾಜಸಿಂಹನಿಗೂ ಇದ್ದ ''ಶಿರಸ್ಸರಸಿ ಶಂಕರಃ'' ''ಮಹೇಶ್ವರದೀಪ್ತಿಮೌಲಿಃ'' ''ಶಿವಚೂಡಾಮಣಿ'' ಇತ್ಯಾದಿ ವಿಶೇಷಣ-ಗಳನ್ನು ಅನುಲಕ್ಷಿಸಿ ಶಾಸನತಜ್ಞರಾದ ಕೃಷ್ಣಶಾಸ್ತ್ರಿಗಳು ಬಸವೇಶ್ವರನ ಕಾಲಕ್ಕಿಂತಲೂ ಹಿಂದಿನಿಂದಲೂ ಲಿಂಗವನ್ನು ಧರಿಸುವ ಪದ್ಧತಿಯಿತ್ತೆಂದು ನಿರ್ಧರಿಸಿರುವರು. ಚೋಳರಾಜೇಂದ್ರ ಚೋಳನಿಗೂಶಿವಪಾದಶೇಖರ ಎಂಬ ಬಿರುದ್ದಿತ್ತು. ಜಯಕರ್ನಾ-ಟಕ (ಸಂ ೧೩–೩)ದಲ್ಲಿನ ಲೇಖನದಲ್ಲಿ ಡಿ. ಎಲ್. ನರಸಿಂಹಾಚಾರ್ಯರೂ ಇದೇ ಅಭಿಪ್ರಾಯವುಳ್ಳವರಾಗಿದ್ದಾರೆ. ಆದುದರಿಂದ ಕಂಚಿದೇವಸ್ಥಾನ ಮಠವು ತಲೆಯಲ್ಲಿ ಲಿಂಗವನ್ನು ಧರಿಸುತ್ತಿದ್ದ ಮಾಹೇಶ್ವರ ಸಿದ್ಧಾಂತದ ಮಠವೆಂಬುದು ನಿಸ್ಸಂದೇಹವಾ-ದುದಾಗಿದೆ. ಡಾ|| ಡಿ. ವಿ. ಗುಂಡಪ್ಪನವರು ಅವರ ''ವಿದ್ಯಾರಣ್ಯರ ಸಮಕಾಲೀನರು'' ಎಂಬ ಗ್ರಂಥದ ೮ನೆಯ ಪುಟದಲ್ಲಿ ಗಮನಿಸಿರುವಂತೆ ''ಶ್ರೀಕಂಠನಾಮಕ'' ಗುರು ಗಳೊಬ್ಬರು ಸಾಯಣರಿಗೆ ಇದ್ದರೆಂಬುದು ಕಂಚಿಯ ವರದರಾಜ (ಅರುಳಾಲ್ ಪೆರ ಮಾಳ್) ದೇವಾಲಯದ ಗೋಡೆಯ ಮೇಲಿರುವ ಒಂದು ಶಾಸನದಿಂದ ನಿರ್ವಿವಾ-ದವಾಗಿ ಸ್ಪಷ್ಟಪಟ್ಟಿದೆ. ಆ ಶಾಸನದಲ್ಲಿ ''ಸ್ವಾಮೀ ಸಂಗಮ ಭೂಪತಿಃ ಕವಿವರ ಶ್ರೀಕಂಠನಾಥೋ ಗುರುಃ '' ಇತ್ಯಾದಿಯಾಗಿ ಹೇಳಿರುವುದರಲ್ಲಿ ಸಾಯಣನ ಹಿರಿಮೆಗೆ ಶ್ರೀಕಂಠನಾಥ ಗುರುವು ಅವನಿಗೆ ಗುರುವಾಗಿರುವುದೇ ಕಾರಣವೆಂಬಂತಿದೆ ಸಾಯಣನ ಸಹೋದರರಲ್ಲಿ ಕಿರಿಯವನಾದ ಭೋಗೀನಾಥನು ಅವನ ''ಮಹಾ ಗಣಪತಿ ಸ್ತವ'' ದಲ್ಲಿ ಶ್ರೀಕಂಠಗುರುವನ್ನು ಸ್ತೋತ್ರ ಮಾಡಿರುವುದನ್ನು ಅಣ್ಣ ಸಾಯಣನು ತನ್ನ 'ಅಲಂಕಾರ ಸುಧಾನಿಧಿ' ಯಲ್ಲಿ ಉದಾಹರಿಸಿದ್ದಾನೆ. ಇವರ ಸಹೋದರ ಮಾಧವಾ ಚಾರ್ಯನು ''ಪರಾಶರ ಸ್ಮೃತಿವ್ಯಾಖ್ಯೆ''ಯ ಪೀಠಿಕೆಯಲ್ಲಿ ''ಹೃದಿಭಜೇ ಶ್ರೀಕಂಠ-ಮವ್ಯಾಹತಂ'' ಎಂದು ಶ್ರೀಕಂಠಗುರುವಿನ ಸ್ತೋತ್ರ ಮಾಡಿದ್ದಾನೆ. ಈ ಮೂವರಿಗೂ ಹಾಗೂ ಇವರ ರಾಜನಾದ ಸಂಗಮನಿಗೂ ಗುರುವಾದ ಶ್ರೀಕಂಠನಾಥನನ್ನು ಬಿಟ್ಟರ ಗುಂಟಿ ಶಾಸನದಲ್ಲಿ [E.P. 9. 3. 21; 1356 A. D.] ಪಶುಪತಿಯ ಅವತಾರ

ವೆಂಬಂತೆ ಹೊಗಳಿದೆ. ಅವನ ಆಜ್ಞೆಯನ್ನು ರಾಜನು "ಅಗ್ರಹೀದಂಜಲೀಗ್ರಥ್ನಂನವ ನಮ್ರೇಣ ಮೌಲಿನಾ" ಎಂದರೆ ಅಂಜಲೀಬದ್ಧ ನಮ್ರನಾಗಿ ತಲೆಯನ್ನು ಬಗ್ಗಿಸಿ ಸ್ವಿಕರಿಸಿದಂತೆ ಹೇಳಿದೆ. ಈ ಗುರುವು ತನ್ನೀ ಶಿಷ್ಯರಿಗೆ ನಾಥ ಮಾಹೇಶ್ವರ ತತ್ತ್ವವನ್ನು ನವೀನ ರೀತಿಯಲ್ಲಿ ಬೋಧಿಸಿದುದನ್ನು ಹೀಗೆ ಹೇಳಿದೆ.

"ಮಾಹೇಶ್ವರಾಣಾಂ ತತ್ತ್ವಾನಾಂ ಮಾನ್ಯೇಯಸ್ಮಿನ್ ಪ್ರದರ್ಶಕೇ ।
ಪ್ರಾಜಾಮಾದರ್ಶಿ ಸಾಥಾನಾಂ ಪ್ರಾಯೇಣ ನವತಾಬುವಿ" ॥

ಲಿಂಗಧಾರಿ ಪಲ್ಲವರಾಜರಿಂದ ನಿರ್ಮಿತವಾದ ದೇವಸ್ಥಾನ ಮಠಗಳಲ್ಲಿ ಲಿಂಗ ಯಜ್ಞೋಪವೀತಧಾರಿ ಮಹೇಶ್ವರ ಗುರುಗಳಿಂದ ಅವರ ಶಿಷ್ಯರಿಗೆ ಮಾಹೇಶ್ವರ ಸಿದ್ಧಾಂತವೇ ಉಪದೇಶಿಸಲ್ಪಡುತ್ತಿದ್ದುದು ಅನಿರೀಕ್ಷಿತವಲ್ಲ. ಇಲ್ಲಿ ಬೇರೆ ಯಾವ ಶೈವ ಸಿದ್ಧಾಂತವಾದರೂ ಇದ್ದುದಕ್ಕೆ 12 ನೆಯ ಶತಮಾನಕ್ಕಿಂತ ಹಿಂದಿನ ಯಾವ ಆಧಾರವೂ ಇಲ್ಲ.

ಈ ಮಾಧವ ಸಹೋದರರು ಸಾಮಾನ್ಯವಾಗಿ ವಿದ್ಯಾತೀರ್ಥ ಮಾಹೇಶ್ವರರನ್ನು ಗುರುವಾಗಿ ಸ್ಮರಿಸುತ್ತಿರುತ್ತಾರೆ. ಶ್ರೀಕಂಠನಾಥರೇ ವಿದ್ಯಾತೀರ್ಥಮಹೇಶ್ವರರೆಂದು ಎಸ್. ಶ್ರೀಕಂಠಯ್ಯನವರು ಅವರ "ಫೌಂಡರ್ಸ್ ಆಫ್ ವಿಜಯನಗರ" ಎಂಬ ಗ್ರಂಥದಲ್ಲಿ ಸಾಧಾರವಾಗಿ ಹೇಳಿದ್ದಾರೆ. ಇದು ಹೇಗೆ ಇರಲಿ, ಈ ಸಹೋದರರು ಮೇಲೆ ಹೇಳಿದ ಶಾಸನದಂತೆ ಮಾಹೇಶ್ವರ ತತ್ತ್ವಾನುಯಾಯಿಗಳಾಗಿರುವುದರಿಂದ ವಿದ್ಯಾತೀರ್ಥ ಮಹೇಶ್ವರ ಗುರುಗಳೂ ಮಾಹೇಶ್ವರಾನುಯಾಯಿಗಳೇ ಆಗಿರಬೇಕೆಂದಾಯಿತು.

The adjunct " Maheshwara-deepti moulihi "........ with titles like " Siva chudamani " ........all with reference to Rajasimha, looks as if the king did actually wear a figure or rather, his symbol linga on his head. The fact also hinted in the verse " Yesyangusta bharakranta " etc.... Refers to Pallva king Mahendravarma Gunabhara;........ All these references clearly point to the existence of a linga-cult, long before the revival of the Veerasaiva faith under ............ Basava........ in which wearing of linga playa a prominent part-Ep. 1 vll8.



ವಿದ್ಯಾತೀರ್ಥ ಮಹೇಶ್ವರರ ಹೆಸರಿನ ಕೊನೆಯಲ್ಲಿ 'ಮಾಹೇಶ್ವರ' ಎಂಬ ಪದವು
ತಪ್ಪದೆ ಇರುವುದು. ಅವರು ಮಾಹೇಶ್ವರಾನುಯಾಯಿಗಳೆಂಬುದಕ್ಕೆ ಗುರುತಾಗಿದೆ.
ಮಹೇಶ್ವರರ ಹೆಸರಿನ ಕೊನೆಯಲ್ಲಿ "ಮಾಹೇಶ್ವರ" ಎಂದಾಗಲೀ 'ಮಹೇಶ್ವರ'
ಎಂದಾಗಲೀ ಪದವಿರುತ್ತೆಂದು ಡಾ॥ ಚಿದಾನಂದ ಮೂರ್ತಿಯವರು ಅವರಶಾಸನಗಳ
ವಿಷಯದ ಗ್ರಥದಲ್ಲಿ ಹೇಳಿ "ಮಹೇಶ್ವರ" ಎಂದು ಅಂತ್ಯವಾಗುವ ಪಲ್ಲವ ರಾಜ
ಕುಮಾರನ ಹೆಸರಿರುವ ಶಾಸನದ ಆಧಾರವನ್ನು ಕೊಟ್ಟಿದ್ದಾರೆ. ಕಪಟರಾಳಕೃಷ್ಣ
ರಾಯರ ಲಾಕುಳಶೈವರ ಇತಿಹಾಸ ಗ್ರಂಥದ ಆರನೆಯ ಪ್ರಕರಣದಲ್ಲಿ ಬ್ರಾರ್ಹಣ
ರಲ್ಲೂ ಶುದ್ಧಶೌತೀಯ ಬ್ರಾಹ್ಮಣರಿದ್ದುದನ್ನು ಹೇಳಿ ಅರಸಿಕೆರೆ ನಂ ೧೨೭ ಕ್ರಿ.ವ.
೧೧೮೫ ನೆ ಶಾಸನದಲ್ಲಿ ಉಕ್ತನಾದ "ಶಿವಮಾಹೇಶ್ವರಾಗ್ರಗಣ್ಯ ಪಗ್ಗಡೆ ಸಂಕರ
ಣನಾಯಕನ" ಸೊರಬ ನಂ ೩೪೮ ನೆಯ ಶಾಸನದಲ್ಲಿನ 'ಶಿವಪಾದ ಶೇಖರ
ಮಾಹೇಶ್ವರಗಣ" ದೇವಪ್ಪ ನಾಯಕ ಮತ್ತು ಹಾಸನ ನಂ ೭೨ ನೆಯ ಶಾಸನದ
"ಮಹೇಶ್ವರಾಗ್ರಗಣ್ಯ" ನ ಉದಾಹರಣೆಯನ್ನು ಕೊಟ್ಟಿದ್ದಾರೆ. ಈ ತರದ ಶುದ್ಧ
ಶೈವಬ್ರಾಹ್ಮಣರು ಆರಾಧ್ಯಬ್ರಾಹ್ಮಣ ಸಂಪ್ರದಾಯದ ಗೋಳಕೀಮಠದ ಅನುಯಾ
ಯಿಗಳೇದೂ ಸ್ಪಷ್ಟ ಮಾಡಿದ್ದಾರೆ. ಇಲ್ಲಿ ಗಮನಿಸಬೇಕಾದುದು ಏನೆಂದರೆ ಮಹೇ
ಶ್ವರ ಪದದೊಡನೆ ಶಿವಪಾದ ಶೇಖರ ಪದವಿರುವುದು. ಶಿಲಾಲೇಖ ಶಾಸ್ತ್ರಜ್ಞ ಕೃಷ್ಣ
ಶಾಸ್ತ್ರಿಗಳು ಹೇಳಿರುವುದರಂತೆ ತಲೆಯಲ್ಲಿ ಲಿಂಗವನ್ನು ಧರಿಸಿದ್ದುದನ್ನು ಸೂಚಿಸು
ತ್ತದೆ. ಕ್ರಿ.ಶ. ೧೦೭೮ ನೆಯ ಬೆಳ್ಳಿಗಾವಿ ೯೪ ನೆಯ ಶಾಸನದಲ್ಲಿ "ಲಿಂಗಲಿಂಗಿಜ
ನಸನ್ನಿಧಿಯೊಳ್' ಎಂದಿರುವುದನ್ನಿದು ಜ್ಞಾಪಕಕ್ಕೆ ತರುತ್ತದೆ. ಶಾಸನಾದಿಗಳಲ್ಲಿಯೂ
ಗ್ರಂಥಗಳಲ್ಲಿಯೂ ಮಹೇಶ್ವರ ಎಂಬ ಪದವು ತಪ್ಪದೆ ವಿದ್ಯಾತೀರ್ಥ ಮಹೇಶ್ವರರ
ಹೆಸರಿನ ಅಂತ್ಯದಲ್ಲಿರುವುದು, ಅವರು ಮಾಹೇಶ್ವರಾನುಯಾಯಿಯಾಗಿ ಮಹೇಶ್ವರ
ಸಿದ್ಧಾಂತದ ಉಪದೇಶವನ್ನು ಪಡೆಯುತ್ತಿದ್ದ ವೇದ ಭಾಷ್ಯಕಾರರಾದ ಸಾಯಣರ, ಅವರ
ಹೆಸೋದರರ ಮತ್ತು ಅವರ ಸಂಗಮನ ಗುರುಗಳಾಗಿದ್ದುದನ್ನು ಸ್ಪಷ್ಟ ಪಡಿಸುತ್ತದೆ.
ಅಲ್ಲದೆ ಶ್ರೀಕಂಠರೇ ವಿದ್ಯಾತೀರ್ಥಗುರುಗಳಾದುದನ್ನು ಸಂಭವನೀಯವೆನಿಸುತ್ತದೆ.

## ಜೀವನ ಸಂಗಾತಿಯ ಲಕ್ಷಣ

—ನ. ಮುನಿಸ್ವಾಮಿ

ಇಲ್ಲದುದೇನು ಇನಿಯಳು ಸುಗುಣೆಯಾಗಿರೆ ?
ಉಳ್ಳದುದೇನು ಇನಿಯಳು ಸುಗುಣೆಯಾಗದಿರೆ ?
ಸತಿ ಸದ್ಗುಣಗಳುಳ್ಳವಳಾದರೆ ಆ ಗೃಹ ಜೀವನದಲ್ಲಿ ಇರುವದಾರಿದ್ರ್ಯವೇನು!
ಅವಳು ಸದ್ಗುಣಗಳಿಲ್ಲದವಳಾದರೆ ಆ ಗೃಹಜೀವನದಲ್ಲಿ ನಿರುವ ಶ್ರೀಮಂತಿಕೆ ಏನು ?

(ತಮಿಳು ವೇದವೆಂದು ಪ್ರಸಿದ್ಧವಾದ "ತಿರುಕ್ಕೊರಳ್" ಕನ್ನಡ ಅನುವಾದ

# ಜೈ ನ ದ ರ್ಶ ನ

—ಡಾ॥ ಎಂ. ಡಿ. ವಸಂತರಾಜ್

ಅನಾದಿ ಕಾಲದಿಂದ ಕರ್ಮ ಬಂಧನಕ್ಕೊಳಗಾಗಿರುವ ಜೀವಿಗಳಲ್ಲಿ ಕಾಯ ವಚನ ಮತ್ತು ಮನಸ್ಸುಗಳ ಕ್ರಿಯೆ ನಡೆದಿರುತ್ತದೆ. ಈ ಕ್ರಿಯೆಗಳ ನಿಮಿತ್ತದಿಂದ ಆತ್ಮ ಪ್ರದೇಶದಲ್ಲಿ ಪರಿಸ್ಪಂದವಾಗುವುದು. ಈ ಪರಿಸ್ಪಂದವನ್ನು ಯೋಗವೆನ್ನುವರು. ಯೋಗ ರೂಪವಾದ ಈ ಪ್ರಣಾಲಿಕೆಯ ಮೂಲಕ ಆತ್ಮಪ್ರದೇಶಕ್ಕೆ ಪೌದ್ಗಲಿಕವಾದ ಕರ್ಮದ ಆಸ್ರವವಾಗುವುದು. ಹೀಗೆ ಆಸ್ರವವಾಗುವ ಕರ್ಮವನ್ನು ಆತ್ಮನಲ್ಲಿ ಅದು ಉಂಟುಮಾಡುವ ಫಲದ ಅಪೇಕ್ಷೆಯಿಂದ ಘಾತಿ ಮತ್ತು ಅಘಾತಿ ಎಂದು ಪ್ರಧಾನವಾಗಿ ಎರಡು ಪ್ರಕಾರವಾಗಿ ವಿಂಗಡಿಸಬಹುದು. ಆತ್ಮನ ಸ್ವಾಭಾವಿಕ ಗುಣಗಳನ್ನು ಘಾತ ಮಾಡುವ ಕರ್ಮ ಪ್ರಕಾರವು ಘಾತಿ ಕರ್ಮ. ಆತ್ಮನ ಗುಣಕ್ಕೆ ಹಾನಿ ತಾರದೆ ಅವನನ್ನು ಸಾಂಸಾರಿಕ ಬಂಧನದಲ್ಲಿರಿಸುವ ಕರ್ಮ ಪ್ರಕಾರವು ಅಘಾತಿ ಕರ್ಮ. ಪುನಃ ಘಾತಿ ಕರ್ಮವು ಜ್ಞಾನಾವರಣೀಯ, ಮೋಹನೀಯ ಮತ್ತು ಅಂತರಾಯ ಎಂಬ ನಾಲ್ಕು ಪ್ರಧಾನ ಭೇದವುಳ್ಳದ್ದಾಗಿಯೂ, ಅಘಾತಿಯು ವೇದನೀಯ, ಆಯುಷ್ಯ,ನಾಮ ಮತ್ತು ಗೋತ್ರ ಎಂಬ ನಾಲ್ಕು ಮುಖ್ಯ ಭೇದಗಳುಳ್ಳದ್ದಾಗಿದೆ. ಈ ಕರ್ಮಗಳ ಹೆಸರುಗಳು ಅನ್ವರ್ಥಗಳಾಗಿದ್ದು ಅವು ಆತ್ಮನಲ್ಲಿ ಆಯಾಯ ಪ್ರಕಾರದ ಶುಭ ಆಯು, ಮನುಷ್ಯ ಗತಿ' ಜೀವಗತಿ, ಇದೇ ಮುಂತಾದ ಫಲದಾಯಕ ಪ್ರಕಾರವಾದ ನಾಮಕರ್ಮ ವಿಭಾಗ, ಉಚ್ಚ ಗೋತ್ರ ವಿಭಾಗ- ಇವು ಪುಣ್ಯ ಕರ್ಮಗಳು, ಇತರ ಪ್ರಕಾರ-ಗಳು ಪಾಪಕರ್ಮಗಳು.

**ಬಂಧ:**– ಆಸ್ರವವಾದ ಕರ್ಮಪುದ್ಗಲವು ಜೀವದೊಡನೆ ಹೊಂದುವ ಸಂಬಂಧವನ್ನು ಬಂಧವೆನ್ನುವರು. ಇದು ಬಂಧದ ಪ್ರಥಮದಶೆ. ಅನಂತರದಲ್ಲಿ ಪ್ರಧಾನತಯಾ ಇದರ ನಾಲ್ಕು ಪ್ರಕಾರಗಳನ್ನು ಹೇಳಿದೆ. ಜ್ಞಾನಾವರಣಾದಿ ಕರ್ಮಗಳು, ಅವುಗಳ ಕಾರ್ಯನಡೆಸುವ ಸಾಮರ್ಥ್ಯ ಹೊಂದುವುವು, ಉದಾಹರಣೆಯಾಗಿ ಜ್ಞಾನಾವರಣೀಯವು ವಸ್ತುಸ್ವರೂಪ ಜ್ಞಾನವಾಗದಂತೆ ತಡೆಯುಂಟುಮಾಡಿರುವ ಕಾರ್ಯಶಕ್ತಿಯುಳ್ಳದ್ದಾಗುವುದು. ಇದೇ ರೀತಿಯಾಗಿ ಇತರ ಕರ್ಮಗಳಲ್ಲಿಯೂ ಆಯಾಯ ಕಾರ್ಯಶಕ್ತಿಯುಂಟಾಗುವುದು ಇದು ಪ್ರಕೃತಿ ಬಂಧ. ಈ ಕರ್ಮಗಳು ತಮ್ಮ



ಈ ಸ್ವಭಾವದಿಂದ ಪರಿಚ್ಯುತಿ ಹೊಂದದೆ, ಕಾಲದ ಒಂದು ಅವಧಿಯ ಪರ್ಯಂತ ಇರುವ ಸ್ಥಿತಿಯನ್ನು ಹೊಂದುವುವು. ಇದು ಸ್ಥಿತಿ ಬಂಧ. ಕರ್ಮಗಳು ಕಾಲದ ಅವಧಿಯ ಕೊನೆಯಲ್ಲಿ ಅಥವಾ ಕಾರಣನಿಮಿತ್ತದಿಂದ ವಿಪಾಕಗೊಂಡು ಫಲ ಕೊಡುವುದು. ಅನುಭಾಗ ಬಂಧವು ಆತ್ಮಪ್ರದೇಶವಲ್ಲಿ ಬಂದು ಸೇರಿದ ಕರ್ಮ ಪರಮಾಣುಗಳ ಸಂಖ್ಯೆ ನಿಯತವಾಗುವುದು. ಪ್ರದೇಶ ಬಂಧ ಈ ರೀತಿಯಾಗಿ ಆಸ್ರವ ಮತ್ತು ಬಂಧ ತತ್ವಗಳು ಆತ್ಮನ ಭವ ಭ್ರಮಣೆಯ ಕಾರಣ ಮತ್ತು ರೀತಿಯನ್ನು ವಿಶದಪಡಿಸುತ್ತವೆ.

**ಸಂವರ:**–ನೂತನವಾಗಿ ಕರ್ಮ ಆಸ್ರವವಾಗುವುದರ ನಿರೋಧವಾಗುವುದನ್ನು ಸಂವರವೆನ್ನುವರು. ಇದು ಭಾವ ಸಂವರ ಮತ್ತು ದ್ರವ್ಯ ಸಂವರವೆಂದು ಎರಡು ಪ್ರಕಾರವಾಗಿದೆ. ಸಂಸಾರಕ್ಕೆ ನಿಮಿತ್ತವಾದ ಕ್ರಿಯೆಗಳಿಂದ ನಿವೃತ್ತಿ ಹೊಂದುವುದು, ಭಾವ ಸಂವರವು, ಇದರ ನಿಮಿತ್ತದಿಂದ ಕರ್ಮಪುದ್ಗಲಗಳ ಆಸ್ರವವಾಗದಿರುವುದು ದ್ರವ್ಯ ಸಂವರವು.

**ನಿರ್ಜರಾ :**-ನೂತನವಾಗಿ ಆಸ್ರವವಾಗುವ ಕರ್ಮನಿರೋಧವು ಸಂವರದ ಮೂಲಕ ಆಗುವುದಾದರೂ ಪೂರ್ವಾರ್ಜಿತ ಕರ್ಮಗಳ ಬಿಡುಗಡೆಯು ಮುಕ್ತಿಸಿದ್ಧಿಗೆ ಅತ್ಯವಶ್ಯಕ. ಏಕದೇಶರೂಪದಿಂದ ಆಗುವ ಕರ್ಮ ಬಿಡುಗಡೆಯು ನಿರ್ಜರೆಯು ಇದು ಸವಿಪಾಕ ನಿರ್ಜರೆ ಮತ್ತು ಅವಿಪಾಕ ನಿರ್ಜರೆಯೆಂದು ಎರಡುವಿಧ. ಕರ್ಮಗಳು ನಿಯತಕಾಲಾಂತ್ಯದಲ್ಲಿ ಫಲವಿತ್ತ ಬಳಿಕ ಆಗುವ ಬಿಡುಗಡೆ ಸವಿಪಾಕ ನಿರ್ಜರೆಯು, ವಿಪಾಕ ಕಾಲದ ಪೂರ್ವಭಾವಿಯಾಗಿಯೇ ಪಾಕಗೊಳಿಸುವ ಮೂಲಕ ಆಗುವ ಬಿಡುಗಡೆಯು ಅವಿಪಾಕ ನಿರ್ಜರೆಯು ಸಂವರ ಪೂರ್ವಕ, ತಪಸ್ಸಿನ ಮೂಲಕ ಆಗುವ ನಿರ್ಜರೆಯು ಮುಕ್ತಿ ಸಾಧಕವು.

**ಮೋಕ್ಷ:**–ಪರಿಪೂರ್ಣವಾಗಿ ಕರ್ಮದಿಂದ ಬಿಡುಗಡೆ ಹೊಂದುವುದು ಮೋಕ್ಷವು. ಮುಕ್ತಾತ್ಮನು ಊರ್ಧ್ವಲೋಕದ ತುದಿಯಲ್ಲಿ ಹೋಗಿ ನಿಲ್ಲುವನು. ಇವನು ಅನಂತ ಜ್ಞಾನ, ಅನಂತ ದರ್ಶನ, ಅನಂತ ವೀರ್ಯ, ಅನಂತಸುಖ, ಸೂಕ್ಷ್ಮತ್ವ, ಅವಗಹನ, ಅಗುರುಲಘುತ್ವ ಮತ್ತು ಅವ್ಯಾಬಾಧತ್ವ ಎಂಬ ಎಂಟು ಗುಣಯುಕ್ತವಾಗಿ ಪರಮಾತ್ಮ ಸ್ವರೂಪದಲ್ಲಿರುವನು.

**ತತ್ವಜ್ಞಾನಿಯಾಗುವ ಬಗೆ:**–'ಪ್ರಮಾಣ ನಯೈರಧಿಗಮಃ'-(ತ.ಸೂ ಅ. 1.ಸೂ.6) ಪ್ರಮಾಣ ಮತ್ತು ನಯಗಳ ಮೂಲಕ ಜೀವಾದಿ ತತ್ವಗಳ ಜ್ಞಾನವಾಗುವುದು. ವಸ್ತುವನ್ನು ಪೂರ್ಣವಾಗಿ ತಿಳಿಯುವ ಜ್ಞಾನವು ಪ್ರಮಾಣವು; ವಸ್ತುವಿನ

ಏಕದೇಶವನ್ನು ತಿಳಿಯುವ ಜ್ಞಾನವು ನಯವು.[11] ಪ್ರಮಾಣವು ಸ್ವಾರ್ಥ ಮತ್ತು ಪರಾರ್ಥ ಎಂದು ಎರಡು ಪ್ರಕಾರಗಳಾಗಿವೆ. ಜ್ಞಾತೃವು ಯಾವುದರ ಮೂಲಕ ಅನ್ಯರಿಗೆ ತಿಳುವಳಿಗೆಯುಂಟುಮಾಡಲಾಗುವುದೋ ಅದು ಪರಾರ್ಥ ಪ್ರಮಾಣವು, ಜ್ಞಾತೃವು ಯಾವುದರ ಮೂಲಕ ತಾನು ತಿಳಿದುಕೊಳ್ಳುವನೋ ಅದು ಸ್ವಾರ್ಥ ಪ್ರಮಾಣವು, ಜ್ಞಾನ ರೂಪವೇ ಆಗಿದೆ. ಅನ್ಯರಿಗೆ ವಚನ ಮೂಲಕ ತಿಳಿಯಪಡಿಸ ಬೇಕಾಗುವುದರಿಂದ ಪರಾರ್ಥ ಪ್ರಮಾಣವು ವಚನ ರೂಪವಾಗಿರುವುದು, ಜ್ಞಾನವನ್ನು ಮತಿ, ಶ್ರುತ, ಅವಧಿ, ಮನಃ ಪರ್ಯಯ ಮತ್ತು ಕೇವಲ ಎಂದು ಐದು ಪ್ರಕಾರವಾಗಿ ವಿಭಾಗ ಮಾಡಿದೆ. ಇವುಗಳಲ್ಲಿ ಜ್ಞಾನಾತ್ಮಕವಾದ ಶ್ರುತವು ಸ್ವಾರ್ಥ ಪ್ರಮಾಣವಾಗಿಯೂ, ವಚನಾತ್ಮಕವಾದ ಶ್ರುತವು ಪರಾರ್ಥ ಪ್ರಮಾಣವಾಗಿಯೂ ಇದೆ. ನಯವು ಶ್ರುತಜ್ಞಾತದ ಭೇದವಾಗಿದೆ.

ಜ್ಞಾನ ಭೇದಗಳನ್ನು ಹೇಳುವಲ್ಲಿ ಜೈನ ದರ್ಶನವು, ಸಾಧರಣವಾಗಿ ಅನ್ಯತ್ರ ಕಂಡುಬಾರದಿರುವ, ತನ್ನದೇ ಆದ ವೈಶಿಷ್ಟ್ಯವುಳ್ಳದ್ದಾಗಿದೆ. ಕರ್ಮಬದ್ಧ ಆತ್ಮನಲ್ಲಿ ಜ್ಞಾನವು, ಜ್ಞಾನಾವರಣೀಯ ಕರ್ಮದಿಂದ ಆವರಣ ಹೊಂದಿರುವುದಾದ್ದರಿಂದ ಪೂರ್ಣಾಭಿವ್ಯಕ್ತಿಯುಳ್ಳವನಾಗಿರುವುದಿಲ್ಲ. ಈ ರೀತಿಯಾಗಿ ಕರ್ಮಬದ್ಧ ಅವಸ್ಥೆಯಲ್ಲಿರುವ ಜೀವದಲ್ಲ ಮತಿ, ಶ್ರುತ, ಅವಧಿ ಮತ್ತು ಮನಃಪರ್ಯಂತ ಎಂಬ ನಾಲ್ಕು ಪ್ರಕಾರದ ಜ್ಞಾನಭೇದಗಳಾಗಬಹುದು. ಇವುಗಳಲ್ಲಿ ಮತಿಜ್ಞಾನವು ಇಂದ್ರಿಯ ಮತ್ತು ಮನಸ್ಸುಗಳ ಸಹಕಾರದಿಂದ ಅಭಿವ್ಯಕ್ತಿ ಹೊಂದುವುದು. ಶ್ರುತವು ಮತಿ ಜ್ಞಾನ ಪೂರ್ವಕವಾಗಿ ಆಗುವುದು. ಸ್ಮೃತಿ, ಸಂಜ್ಞಾ, ಚಿಂತಾ ಮತ್ತು ಅಭಿನಿಬೋಧಗಳು ಮತಿಜ್ಞಾನದ ನಾಮಾಂತರಗಳು, ಇವುಗಳಲ್ಲಿ ಚಿಂತಾ ಮತ್ತು ಅಭನಿಬೋಧಿಗಳು ಅನುಕ್ರಮವಾಗಿ ನೈಯಾಯಿಕ ದಾರ್ಶನಿಕರ ತರ್ಕ ಮತ್ತು ಅನುಮಾನಗಳೊಡನೆ ಸಮಾನತೆಯುಳ್ಳವಾಗಿವೆ.[12] ಶ್ರುತ ಜ್ಞಾನವು ಇತರ ದಾರ್ಶನಿಕರ ಆಗಮ ಪ್ರಾಮಾಣ್ಯದೊಡನೆ ಸಾದೃಶ್ಯತೆಯುಳ್ಳದ್ದಾಗಿದೆ. ಮತಿ ಮತ್ತು ಶ್ರುತ ಜ್ಞಾನಗಳು ವಾಸ್ತವವಾಗಿ ಪರೋಕ್ಷ ಜ್ಞಾನಗಳಾಗಿವೆ. ಆದರೆ ವ್ಯಾವಹಾರಿಕ ದೃಷ್ಟಿಯಿಂದ ತರ್ಕಗ್ರಂಥಗಳಲ್ಲಿ ಇವುಗಳನ್ನು ಸಾಂವ್ಯವಹಾರಿಕ ಪ್ರತ್ಯಕ್ಷಗಳೆಂದು ಹೆಸರಿಸಲಾಗಿದೆ. ಅವಧಿ ಮನಃಪರ್ಯಂತ ಮತ್ತು ಕೇವಲ ಜ್ಞಾನಗಳು ಪ್ರತ್ಯಕ್ಷ ಜ್ಞಾನಗಳು. ಈ ಜ್ಞಾನಗಳು ಇತರ ದಾರ್ಶನಿಕರಲ್ಲಿ ಮಾನ್ಯತೆಹೊಂದಿರುವ ಆರ್ಷಪ್ರತ್ಯಕ್ಷದೊಡನೆ ಸ್ಥೂಲ ರೀತಿ ಸಾದೃಶ್ಯತೆಯುಳ್ಳವಾಗಿವೆ.

---

11 ಪುಢವೀ ಜಲಂ ಚ ಛಾಯಾ ಚ ಉರಿಂದಿಯುವಿಸಯುಕಮ್ಮ ಪರಮಾಣೂ।
ಛಪ್ಪಿಂವಹಜೀಯಂ ಭಣಯಂ ಪೊಗ್ಗಲದವ್ವಂ ಜಿಣವರೇಹಿಂ॥
ಪ್ರ.ಸಾ ಅ.೩ ಗಾಹೆ 40 ರ ಜಯಸೇನಕೃತ ತಾತ್ಪರ್ಯವೃತ್ತಿ.

12 ಸಕಲಾದೇಶಃ ಪ್ರಮಾಣಾಧೀನಃ ವಿಕೂದೇಶೋ ನಯಾಧೀನ ಇತಿ ಸರ್ವಾರ್ಥ ಸಿದ್ಧಿ—ಸೂ. 6 ರ ವ್ಯಾಖ್ಯಾನ.



ಇತರ ದಾರ್ಶನಿಕರಲ್ಲಿ ಕೆಲವರು ಇಂದ್ರಿಯಾರ್ಥ ಸನ್ನಿಕರ್ಷವನ್ನು, ಮತ್ತೆ ಕೆಲವರು ಇಂದ್ರಿಯವನ್ನು ಮತ್ತೂ ಕೆಲವರು ಜ್ಞಾನವನ್ನು ಪ್ರಮಾಣವನ್ನಾಗಿ ಅಂಗೀಕರಿಸಿದ್ದಾರೆ. ಜೈನದರ್ಶನಾನುಸಾರ ಮತಿ ಮುಂತಾದ, ಮೇಲೆ ಹೇಳಿದ, ಐದು ಜ್ಞಾನಗಳು ಪ್ರಮಾಣಗಳಾಗಿವೆ. ಇವುಗಳಲ್ಲಿ ತತ್ತ್ವಾರ್ಥಸೂತ್ರದನುಸಾರವಾಗಿ ಮತಿ ಮತ್ತು ಶ್ರುತ ಜ್ಞಾನಗಳು ಪರೋಕ್ಷ ಪ್ರಮಾಣಗಳಾಗಿಯೂ ಅವಧಿ, ಮನಃ ಪರ್ಯಂತ ಮತ್ತು ಕೇವಲ ಜ್ಞಾನಗಳು ಪ್ರತ್ಯಕ್ಷ ಪ್ರಮಾಣಗಳಾಗಿಯೂ ಇವೆ.

ಅನೇಕಾಂತವಾದ:- ಜೈನ ಸಿದ್ಧಾಂತದನುಸಾರ ಗುಣಕ್ರಿಯೆ, ಸಂಬಂಧ ಮುಂತಾದುವು ದ್ರವ್ಯದ ಅವಸ್ಥಾಂತರಗಳಾಗಿವೆ; ಅವು ದ್ರವ್ಯದಿಂದ ಭಿನ್ನವಾದವು-ಗಳಲ್ಲ. ದ್ರವ್ಯದ ಲಕ್ಷಣ ಸತ್, ಸತ್ ಆಗಿರುವುದೇ ದೃಷ್ಟಿ ಭೇದದಿಂದ ಅಸತ್ ಆಗಿಯೂ ಇದೆ. ಆದ್ದರಿಂದ ಅಸತ್ ಅಥವಾ ಅಭಾವನೆಂಬ ಸ್ವತಂತ್ರ ತತ್ವವಿಲ್ಲ. ಒಂದು ವಸ್ತುವು ತನ್ನ ಸ್ವರೂಪದ ಅಪೇಕ್ಷೆಯಿಂದ ಸತ್ ಆಗಿದೆಯಾದರೆ ಪರವಸ್ತು ರೂಪದ ಅಪೇಕ್ಷೆಯಿಂದ ಅಸತ್ ಆಗಿದೆ. ಉದಾ:- ಜೀವ ಮತ್ತು ಪುದ್ಗಲ-ಗಳೆರಡೂ ದ್ರವ್ಯಗಳೇ ಆಗಿರುವುವಾದರೂ ತಮ್ಮ ತಮ್ಮ ಸ್ವರೂಪಗಳ ಜೀವ ಮತ್ತು ಪುದ್ಗಲಗಳೇ ಆಗಿರುವುದಲ್ಲದೇ, ಜೀವವು ಪುದ್ಗಲವಾಗದು. ಹಾಗೆಯೇ ಪುದ್ಗಲವು ಜೀವವಾಗದು. ಈ ಚಿಂತನೆಯಂತೆ ಜೀವನ ಸ್ವಸ್ವರೂಪದಿಂದ ಜೀವನಾಗಿದ್ದಾನೆ. ಎಂಬುದು ಎಷ್ಟು ಸತ್ಯವೋ ಅಷ್ಟೇ, ಅದು ಪರವಸ್ತುವಾದ ಪುದ್ಗಲರೂಪದ ಅಪೇಕ್ಷೆಯಿಂದ ಪುದ್ಗಲವಲ್ಲ ಎಂಬುದೂ ಸತ್ಯ. ಹೀಗೆ ವಸ್ತುವು ಏಕಸಮಯದಲ್ಲಿ ಸ್ವಸ್ವರೂಪದಿಂದ ಸದ್ಭಾವವುಳ್ಳದ್ದಾಗಿಯೂ ಪರವಸ್ತುವಿನ ಅಪೇಕ್ಷೆಯಿಂದ ಅಸದ್ಭಾವವುಳ್ಳದ್ದಾಗಿಯೂ ಇದೆ. ಈ ಪ್ರಕಾರವಾಗಿ ವಸ್ತು ಸ್ವರೂಪವು ಏಕಾಂತಾತ್ಮಕವಾಗಿದೆ. ಅನೇಕಾಂತಾತ್ಮಕವಾಗಿದೆ.

(ಮುಂದುವರಿಯುವುದು)

---

## ನಿರ್ಥಕ ಐಶ್ವರ್ಯ

—ನ. ಮುನಿಸ್ವಾಮಿ

"ಇಲ್ಲದವರಿಗೊಂದನು ಈಯದನ ಐಸಿರಿ ಮಿಕ್ಕಮೊಯ್ಸಿರಿ ಉಳ್ಳ
ವಳು ಮದುವೆಯಾಗದೆ ಮುಪ್ಪುವಡೆದಂತೆ'

ಬಡಬಗ್ಗರಿಗೆ ಬೇಕಾದದ್ದನ್ನು ಕೊಟ್ಟು ಉಪಕಾರಮಾಡದವನ ಐಶ್ವರ್ಯವು ಅತಿ ಸೌಂದರ್ಯವತಿಯಾದ ಒಬ್ಬ ಹೆಣ್ಣು ವಿವಾಹವಾಗದೆ ವೃದ್ಧಾಪ್ಯವನ್ನು ಹೊಂದಿದಂತೆ ನಿರರ್ಥಕವಾದದ್ದು.

—( ತಮಿಳು ತಿರುಕ್ಕುರಳ್, ಕೃತಿಯಿಂದ )

ಮನುಷ್ಯ ಸದಾ ತನ್ನನ್ನು ತಾನು ವಿಮರ್ಶಿಸಿಕೊಳ್ಳುತ್ತಿರಬೇಕು, ಯಾವಾಗ ಮನುಷ್ಯ ತನ್ನನ್ನು ತಾನು ಸುಧಾರಿಸಿಕೊಳ್ಳುವನೋ ಆಗ ಮಾತ್ರ ತಾನು ಯೋಗ್ಯವಾಗಿ ಬಾಳಿ ಜಗತ್ತಿನಲ್ಲಿ ಪ್ರೇಮದ ಬಾಳನ್ನು ಬಾಳಲು ಸಾಧ್ಯವಾಗುತ್ತದೆ. —ಶ್ರೀವಾಣಿ

# ಕಾಶ್ಮೀರ ಶಿವಾದ್ವೈತ ಸಿದ್ಧಾಂತ

—ಡಿ. ಜೆ. ರುದ್ರಪ್ಪ

ಪ್ರತ್ಯಭಿಜ್ಞೆಯನ್ನು ಅನೇಕ ರೀತಿಯಾಗಿ ನಮ್ಮ ಅನುಭವಕ್ಕೆ ಸಮನ್ವಯ ಪಡಿಸಿಕೊಳ್ಳಬಹುದು. ನಮಗೆ ಪ್ರಪಂಚದಲ್ಲಿ ಜಡ ಚೇತನ, ತಿಳಿಯುವವನು ತಿಳಿಯಲ್ಪಡತಕ್ಕ ವಸ್ತು (ಗ್ರಾಹಕ ಗ್ರಾಹ್ಯ ಭೇಧ) ಎಂಬ ಪರಸ್ಪರ ವಿರುದ್ಧ ಅಂಶಗಳು ತೋರುತ್ತಿವೆ. ಇಲ್ಲಿ ಗ್ರಾಹಕಾನುಭವ ಗ್ರಾಹ್ಯಾನುಭವಗಳನ್ನು ಅಂತರನುಭವ ಬಾಹ್ಯಾನುಭವ ಎಂಬುದಾಗಿ ಹೇಳಬಹುದು. ಹೊರಗಿನ ಎಲ್ಲಾ ಅನುಭವಗಳೂ ದೇಶ, ಕಾಲ, ಆಕಾರ, ಈ ಮೂರು ಧರ್ಮಗಳಿಂದ ಕೂಡಿರುತ್ತವೆ. ಆ ಅನುಭವಗಳು ಜ್ಞಾಪಕಕ್ಕೆ ಬರುವಾಗ್ಗೆ ಈ ಮೂರು ಧರ್ಮಗಳನ್ನೊಳಗೊಂಡೇ ಬರುತ್ತವೆ. ನಾವು ಪೇಟೆಯಲ್ಲಿ ನಾವು ಒಂದು ವಸ್ತುವನ್ನು ಕಳೆದು ತಿಂಗಳು ನೋಡಿದ್ದೆವು ಅನ್ನೋಣ. ಆ ಪದಾರ್ಥವು ಜ್ಞಾಪಕಕ್ಕೆ ಬರುವಾಗ ಪೇಟೆಯಲ್ಲಿ ಯಾವ ಸ್ಥಳದಲ್ಲಿ ನೋಡಿದ್ದೆವೋ ಆ ಸ್ಥಳದ ಜ್ಞಾನವೂ (ದೇಶ), ಆ ಸಮಯಜ್ಞಾನವೂ (ಕಾಲ) ಆ ಪದಾರ್ಥದ ಸ್ವರೂಪ ಜ್ಞಾನವು (ಆಕಾರ) ಆಗುತ್ತವೆ ಅಥವಾ ಬರುತ್ತವೆ. ಕಾಲಾಂತರದಲ್ಲಿ ಬೊಂಬಾಯಿಯಲ್ಲಿಯೋ ಕಲ್ಕತ್ತದಲ್ಲಿಯೋ ನಾವು ನೋಡಿದ್ದ ಸ್ನೇಹಿತನನ್ನು ಕಂಡರೆ ಅಪ್ರಕೃತವಾಗಿರುವ ಆ ಊರಿನ ದೇಶಜ್ಞಾನವೂ ಬರುತ್ತದೆ. ಈ ಕ್ರಮದಲ್ಲಿ ಮೊದಲು ಆಕಾರ, ತರುವಾಯ ದೇಶ, ಹಾಗೆಯೇ ವಿವೇಚಿಸಿದರೆ ಕಾಲ, ಹೀಗೆ ಮೂರು ಧರ್ಮಗಳೂ ಮೂರೆಲೆಗಳಿಂದ ಕೂಡಿದ ಮುತ್ತುಗದೆಲೆಯಂತೆ ಒಟ್ಟಾಗಿ ಸೇರಿರುವ ತ್ರಿಪುಟಿಯಾಗಿರುತ್ತದೆ. ಇದು ಬಾಹ್ಯಾನುಭವಡ ವಿವೇಚನೆ ಇದಕ್ಕೆ ವಿರುದ್ಧವಾಗಿ ಅಂತರನುಭವ ಅಥವಾ ಗ್ರಾಹಕಾನುಭವವು ದೇಶಕಾಲ ಆಕಾರಗಳಿಂದ ದೂರವಾಗಿರುತ್ತದೆ. ದೇಶಕಾಲ ಆಕಾರ ರಹಿತವಾಗಿರುವ 'ನಾನು' ಎನ್ನುವ (ಅಹಂ) ಅನುಭವವು ಕೇವಲ ಸದ್ರೂಪವಾಗಿರುತ್ತದೆ. ದೇಶಕಾಲ ಆಕಾರ ಸಹಿತವಾದ ವ್ಯವಹಾರಗಳನ್ನು ನಾನು ನೋಡಿದೆ, ನಾನು ಕೇಳಿದೆ, ನನಗೆ ತಿಳಿಯಿತು ಎಂಬುವುದು 'ನಾನು' ಎಂಬ ತತ್ವಕ್ಕಿಂತ ಬೇರೆಯಾಗಿರುವ ನೋಡುವಿಕೆ, ಮಾಡುವಿಕೆ, ತಿಳಿಯುವಿಕೆ ಮುಂತಾದ ಕ್ರಿಯಾರೂಪವನ್ನು ಹೊಂದುತ್ತದೆ. ಇದರಲ್ಲಿರುವ ಚಮತ್ಕಾರವು ಇಷ್ಟೆ. ನಾನು ಎಂಬ ಅನುಭವವು ದೇಸ. ಕಾಲ, ಆಕಾರ ಸಹಿತವಾದ 'ಇದಂ' ವ್ಯವಹಾರದೊಡನೆ ಏಕೀ ಭವಿಸಿಯೂ ಇರುತ್ತದೆ, ಭಿನ್ನಭಿನ್ನವಾಗಿಯೂ ಇರುತ್ತದೆ. ಭಿನ್ನವಾಗಿಯೂ ಇರುತ್ತದೆ. ದೇಶ ಕಾಲ ಆಕಾರಸಹಿತವಾದ 'ಇದಂ' (ಗ್ರಾಹ್ಯ) ವ್ಯವಹಾರವು 'ಅಹಂ' (ಗ್ರಾಹಕ) ಇಲ್ಲದೇ ಇಲ್ಲ. ಆದರೆ ದೇಶ ಕಾಲ ಆಕಾರ ರಹಿತವಾದ 'ಅಹಂ' ಅನುಭವವು 'ಇದಂ' ಇಲ್ಲದೇನೂ ಇರಬಹುದು. ಇದರಿಂದ 'ಅಹಂ ಅನುಭವವು (ಗ್ರಾಹಕ ಸ್ವರೂಪವು) ಅನಂತವಾದ ಗ್ರಾಹ್ಯ ವಿಭಾಗಗಳನ್ನೊಳಗೊಂಡು ಅಭಿನ್ನವಾಗಿ ನಿಸ್ತರಂಗವಾಗಿ ಆನಂದ ರೂಪವಾಗಿರುತ್ತದೆ. ಹಾಗೆಯೇ ಅನಂತವಾದ ಬಾಹ್ಯ ಜ್ಞಾನಗಳಿಂದ ಕೂಡಿಯೂ ಇರುತ್ತದೆ. ಈ ವೈಚಿತ್ರ್ಯವನ್ನು ಸಾಮಾನ್ಯ ಜನಗಳು ಗಮನಿಸದಿರುವುದರಿಂದ ಗ್ರಾಹ್ಯ ಬೇರೆ ಗ್ರಾಹಕ ಬೇರೆ ಎಂಬ ತಿಳಿವಳಿಕೆಯಿಂದಿರುವರು. ತತ್ವ ಜ್ಞಾನಿಗಳು ಈ ಗ್ರಾಹ್ಯ ಗ್ರಾಹಕಗಳಿಗಿರುವ ಸಂಬಂಧವನ್ನೂ ಅದರ ಐಕ್ಯವನ್ನೂ ಅದರ ವ್ಯವಹಾರ ಚಮತ್ಕಾರಗಳನ್ನೂ ತಿಳಿದಿರುತ್ತಾರೆ. ಆದುದರಿಂದ ಅವರಿಗೆ ಗ್ರಾಹ್ಯ ಮತ್ತು ಗ್ರಾಹಕ ವ್ಯವಹಾರಗಳಲ್ಲಿ ಪರಮ ಪ್ರಮಾತ್ರಾವೇಶ (ಶಿವಾಭಿನ್ನ) ದೃಷ್ಟಿಯು ಸ್ಥಿರವಾಗಿರುತ್ತದೆ. ಈ ವಿಷಯವನ್ನು 'ವಿಜ್ಞಾನ ಭೈರವ'ವೆಂಬ ಗ್ರಂಥದಲ್ಲಿ ಸೂತ್ರಪ್ರಾಯವಾಗಿ ಹೇಳಿದ್ದಾರೆ.

ಗ್ರಾಹ್ಯ ಗ್ರಾಹಕ ಸಂವಿತ್ತಿಃ ಸಾಮಾನ್ಯ ಸರ್ವದೇಹಿನಾಂ ।
ಯೋಗಿನಾಂತು ವಿಶೇಷೋಯಂ ಸಂಬಂಧೆ ಸಾವಧಾನತಾ ॥

ದೇಶ ಕಾಲ ಆಕಾರಸಹಿತವಾಗಿ ಬರುವ ತಿಳಿವಳಿಕೆಗಳೆಲ್ಲಾ ಕೇವಲ ಕ್ಷಣಿಕಗಳಾಗಿರುವುದೆಂದೂ ಗ್ರಾಹಕಾನುಭವವು ನಿತ್ಯವಾಗಿರುವುದೆಂದೂ ಗ್ರಾಹ್ಯ ಗ್ರಾಹಕಗಳು ಒಂದೇ ಎಂದು ತಿಳಿದರೆ, ಅನಾದಿ ಕಾಲದಿಂದ ಬಂದಿರುವ 'ಅಖ್ಯಾತಿ' ಮೂಲಕವೇ ಈ ಪ್ರಪಂಚದಲ್ಲಿರುವ ರಾಗದ್ವೇಷಗಳು ಹುಟ್ಟಿವೆ ಎಂಬುದು ವ್ಯಕ್ತವಾಗುವುದು. ಇದಕ್ಕೋಸ್ಕರವಾಗಿಯೇ ಗ್ರಾಹ್ಯಗ್ರಾಹಕ ವಿಭಾಗಗಳ ತಿಳಿವಳಿಕೆಗಳು ವಿಶದವಾದರೆ ಈ ವಿಶ್ವಕ್ಕೆಲ್ಲಾ ಮೂಲವಾಗಿರುವ ಮಹಾಚಿತ್ಸಮುದ್ರರೂಪವಾಗಿರುವ ಪರಮ ಶಿವನೊಬ್ಬನೇ ಮಹಾ ಗ್ರಾಹಕನಾಗಿರುವನೆಂದೂ ಸ್ವೇಚ್ಛೆಯಿಂದ ಮಿತಗ್ರಾಹಕನಾಗಿರುವ ಈ ವಿಶ್ವವೆಲ್ಲಾ ಶಿವನ ಸ್ವಾತಂತ್ರ್ಯಶಕ್ತಿಯ ವಿಲಾಸವಾಗಿರುವುದೆಂದೂ ಈಶ್ವರಾಭಿನ್ನವೆಂದೂ ಅನುಭವಕ್ಕೆ ಬರುತ್ತದೆ. ಇದಕ್ಕೆ ಪ್ರತ್ಯಭಿಜ್ಞೆ ಎಂದು ಹೆಸರು.

ಬೇರೆ ಸಂಪ್ರದಾಯಗಳಲ್ಲಿರುವಂತೆ "ಬ್ರಹ್ಮ ಸತ್ಯಂ ಜಗನ್ಮಿಥ್ಯಾ" ಎಂಬ ಭಾವನೆ ಇಲ್ಲಿಲ್ಲ. ಈಶ್ವರನೂ ಸತ್ಯ, ಈಶ್ವರನಿಂದ ಸೃಷ್ಟಿ ಮಾಡಲ್ಪಟ್ಟ, ಈ ಪ್ರಪಂಚವೂ ಸತ್ಯ ಎಂಬುದು ಈ ಸಿದ್ಧಾಂತದ ನಿಶ್ಚಯವಾಗಿರುತ್ತದೆ.

ಚಿಚ್ಛಕ್ತಿಯು ಕಾರಣ, ವಿಶ್ವವು ಕಾರ್ಯ. ಆದುದರಿಂದ ಕಾರ್ಯಕಾರಣಗಳೆರಡೂ ಸತ್ಯವಾದವುಗಳಾಗಿವೆ. ಒಂದು ಸತ್ಯ ಒಂದು ಮಿಥ್ಯ ಎಂಬ ವ್ಯವಹಾರಗಳಿಲ್ಲಿಲ್ಲ. ಈಶ್ವರನೂ ಚಿಚ್ಛಕ್ತಿಯೂ ಅಭಿನ್ನವಾಗಿರುತ್ತಾರೆ. ಶಕ್ತಿಯ ಪ್ರಸರಣವೇ ಈ ವಿಶ್ವ. ಈಶ್ವರನ ಆಧಾರ ವಿಶ್ವವು ಆಧೇಯ. ಆಧೇಯವು ಆಧಾರಕ್ಕೆ ಅಧೀನ

ವಾಗಿರುತ್ತದೆ. ಈಶ್ವರನು ತನ್ನಲ್ಲಿಯೇ ತನ್ನ ಸಂಕಲ್ಪದಿಂದ ವಿಶ್ವವನ್ನು ತೋರ್ಪಡಿಸಿಕೊಳ್ಳುತ್ತಾನೆ. ಚಿದ್ಘನರೂಪವಾಗಿರುವ ಈಶ್ವರನು ಜ್ಞಾನ ಇಚ್ಛಾಕ್ರಿಯಾಶಕ್ತಿಗಳಿಂದ ಕೂಡಿದ್ದರೂ ಶಕ್ತಿಪ್ರಸರ ವಿಲ್ಲದಿರುವ ಸ್ಥಿತಿ ಒಂದು, ಶಕ್ತಿಪ್ರಸರವಿರುವ ಸ್ಥಿತಿ ಒಂದ, ಹೀಗೆ ಎರಡು ಸ್ಥಿತಿಗಳುಳ್ಳವನಾಗಿರುತ್ತಾನೆ. ಶಕ್ತಿಪ್ರಸರವಿಲ್ಲದಿರುವ ಸ್ಥಿತಿ ವಿಶ್ವಾತೀತವಾದ ಪರಾವಸ್ಥೆ. ಇದನ್ನೇ ತತ್ವಗಣನೆಯಲ್ಲಿ ಪರಮಶಿವ ಎನ್ನುವುದು. ಶಕ್ತಿಪ್ರಸರವಿರುವ ಸ್ಥಿತಿಯು ಶಿವನಿಂದ ಭೂಮಿವರೆಗಿರುವ ಮೂವತ್ತಾರು ತತ್ವವಿಭಾಗಗಳುಳ್ಳದ್ದಾಗಿದೆ. ಇದು ವಿಶ್ವಾತ್ಮಕವಾದದ್ದು ಈಶ್ವರನು ತನ್ನಲ್ಲಿ ಸೂಕ್ಷ್ಮವಾಗಿರುವುದನ್ನೇ ಸ್ಥೂಲವಾಗಿ ಪ್ರಕಟಪಡಿಸುತ್ತಾನೆ. ಹೀಗೆ ಪ್ರಕಟವಾದದ್ದೇ ವಿಶ್ವ ಬೇರೆ ತನ್ನಿಂದ ಭಿನ್ನವಾಗಿರುವ ಪದಾರ್ಥದಿಂದ ಸೃಷ್ಟಿಸುವುದಿಲ್ಲ–ಆದುದರಿಂದ ಈ ರೀತಿಯಾದ ಪ್ರಕಟನೆಗೆ 'ಉನ್ಮೀಲನ' ಅಥವಾ 'ಆಭಾಸನ' ಎಂದು ಶಾಸ್ತ್ರವ್ಯವಹಾರವಿದೆ.

ಪ್ರತ್ಯಭಿಜ್ಞಾ ಸಂಪ್ರದಾಯದ ವೈಶಿಷ್ಟ್ಯವೇನೆಂದರೆ ಶಾಸ್ತ್ರಜ್ಞಾನದಿಂದ ಶಿವನೇ ತಾನು ಎಂದು ತಿಳಿದರೂ ಅದನ್ನು ಸಾಕ್ಷಾತ್ಕಾರ ಮಾಡಿಕೊಂಡು ಸಂಪೂರ್ಣವಾದ ಅನುಭವವನ್ನು ಇಲ್ಲಿಯೇ ಪಡೆಯುವುದಕ್ಕೆ ಸ್ವತಂತ್ರವಾದ ಅವಕಾಶವನ್ನು ಕಲ್ಪಿಸಿರುವಿಕೆಯೇ ಆಗಿದೆ. ಪ್ರತ್ಯಕ್ಷ, ಅನುಮಾನ, ಶಬ್ದ ಈ ಮೂರು ಪ್ರಮಾಣಗಳ ಮೂಲಕ ಇವನು ಸಾಕ್ಷಾತ್ಕಾರವನ್ನು ಹೊಂದಲು ಯಾವ ರೀತಿ ಪ್ರಯತ್ನಪಡಬಹುದು ಎಂಬ ಅಂಶವನ್ನು ನಿರ್ಣಯಿಸಲು ಸಹಕಾರಿಯಾಗಿವೆ. ಪ್ರತ್ಯಕ್ಷಾನುಭವದಿಂದ ಶಾಸ್ತ್ರದಲ್ಲಿ ಹೇಳಿರುವ ತನ್ನಲ್ಲಿ ಸಂಕುಚಿತವಾಗಿರುವ ಶಕ್ತಿಸ್ವರೂಪಗಳನ್ನು ತಿಳಿಯಬಹುದು ತಾನು ಯಾವ ಉಪಾಯಾನುಷ್ಠಾನಕ್ಕೆ ಅರ್ಹನೆಂಬುದನ್ನು ತನ್ನ ವ್ಯಕ್ತಿತ್ವದ ನಿಲುವಿನಿಂದ ನಿರ್ಣಯಿಸಬಹುದು. ಅನುಮಾನದಿಂದ ಮೆಟ್ಟಿಲು ಮೆಟ್ಟಿಲಾಗಿ ವಿಕಾಸವನ್ನು ತನ್ನ ಅಭ್ಯಾಸದ ಫಲದ ಅತಿಶಯವನ್ನು ಗುರುತಿಸಬಹುದು.

ಸದ್ಗುರೂಪದೇಶದಿಂದ ತನ್ನ ವ್ಯಕ್ತಿತ್ವವನ್ನು ಸಂಸ್ಕರಿಸಿಕೊಳ್ಳಬಹುದು. ಯಾವುದರಿಂದಲಾದರೂ 'ಪೂರ್ಣಾಹಂವಿಮರ್ಶಾ' ( ನಿರ್ವಿಕಲ್ಪಕವಾದ ಪ್ರಶಾಂತವಾದ ಚಿದನುಭವ ) ಏರ್ಪಟ್ಟರೆ ಆಮೇಲೆ ಈ ಪ್ರಮಾಣಗಳಿಂದ ಏನೂ ಕೆಲಸವಿಲ್ಲ. ಜೀವನು ಶಿವನೇ ಆಗಿದ್ದಾನೆಂದೂ ಶಿವತ್ವಪ್ರಾಪ್ತಿಯು ಒಂದು ಅಪೂರ್ವ ಅಂಶವಲ್ಲವೆಂದೂ ಸದಾ ಅನುಭವದಲ್ಲಿದ್ದರೂ ಅನಾದಿ ಕಾಲದಿಂದ ಬಂದಿರುವ ಮೋಹದಿಂದ ಸ್ವಸ್ವರೂಪ ತಿಳಿಯುತ್ತಾ ಇಲ್ಲವೆಂದೂ ಆಸ್ವಸ್ವರೂಪವನ್ನು ಇವನು ಚಿಚ್ಛಕ್ತಿಯನ್ನು ಉದ್ದೀಪನಗೊಳಿಸುವುದರಿಂದ ಅನುಭವಕ್ಕೆ ತರಲು ಪ್ರತ್ಯಭಿಜ್ಞಾ ತತ್ವವು ಉಪದೇಶಿಸಲ್ಪಟ್ಟಿದೆಯೆಂದೂ ತಿಳಿಯಬೇಕು.

ಕಿಂತು ಮೋಹವಶಾದಸ್ಮಿನ್ ದೃಷ್ಟೇಽಪ್ಯನುಪಲಕ್ಷಿತೇ ।
ಶಕ್ತ್ಯಾವಿಷ್ಕರಣೇನೇಯಂ ಪ್ರತ್ಯಭಿಜ್ಞೋಪದಿಶ್ಯತೇ ॥

(ಮುಂದುವರಿಯುವುದು)



LICENCED TO POST WITHOUT PRE PAYMENT LICENCE NO. 3
Registred with the Registrar of News papers for India under
No. 17139/69
Siddaganga Monthly Magazine Siddaganga Mutt.
Reg No. KRN Q-9

## ಪ್ರಕಟಣೆ

ಪರಮ ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಕೃಪಾಶೀರ್ವಾದದಲ್ಲಿ ಈ ವರ್ಷವೂ ಈ ಕೆಳಕಂಡ ಪ್ರದೇಶಗಳಲ್ಲಿ ಬಸವ ಜಯಂತಿ ಉತ್ಸವ ಸಮಾರಂಭವನ್ನು ಏರ್ಪಡಿಸಲಾಗಿದೆ.

ಮಾನ್ಯ ಆಸ್ತಿಕ ಬಂಧುಗಳು ಕಾರ್ಯಕ್ರಮದಲ್ಲಿ ಭಾಗವಹಿಸಿ ಪೂಜ್ಯರ ಆಶೀರ್ವಾದದಲ್ಲಿ ಭಾಗಿಗಳಾಗಬೇಕೆಂದು ಕೋರಿಕೆ

ದಿನಾಂಕ 11-4-81 ನೆಯ ಶನಿವಾರ ಗುಬ್ಬಿ ತಾ॥ ಪುರದಲ್ಲಿ.
ದಿನಾಂಕ 14-4-81 ನೆಯ ಮಂಗಳವಾರ ಕಡೂರು ತಾ॥ ಬಾಸೂರಿನಲ್ಲಿ.
ದಿನಾಂಕ 17-4-81 ನೆಯ ಶುಕ್ರವಾರ ಕೊಡಗುಜಿಲ್ಲೆ ಕಲ್ಲುಮಠದಲ್ಲಿ.
ದಿನಾಂಕ 21-4-81 ನೆಯ ಮಂಗಳವಾರ ನೆಲಮಂಗಲ ತಾ॥ ಕರಿಮಣ್ಣೆಯಲ್ಲಿ

ಕಾರ್ಯಕ್ರಮಗಳು ನಡೆಯುತ್ತವೆ. ಸರ್ವರಿಗೂ ಆಹ್ವಾನ
ಮುಂಬರುವ ದಿನಾಂಕಗಳನ್ನು ಪ್ರಕಟಿಸುತ್ತೇವೆ.

( 9 ನೇ ಪುಟದಿಂದ )

ಮತ್ತಾರೂ ಇಲ್ಲಯ್ಯ, ಮತ್ತಾರೂ ಇಲ್ಲಯ್ಯ, ಮತ್ತಾರೂ ಇಲ್ಲಯ್ಯ, ನಾನೊಬ್ಬನೇ ಭಕ್ತನು. ಮರ್ತ್ಯಲೋಕವೊಳಗಣ ಭಕ್ತರೆಲ್ಲರೂ ಜಂಗಮಲಿಂಗ ನೀನೆ ಅಯ್ಯ, ಕೂಡಲಸಂಗಮದೇವಾ ಎಂದರು. ಲೋಕದಲ್ಲಿ ಇನ್ನಾರೂ ಭಕ್ತರಿಲ್ಲ, ನಾನೊಬ್ಬನೇ ಎಂದಾಗ ಅಹಂಕಾರದಂತೆ ಕಂಡರೂ, ಅವರ ಮುಂದಿನ ಮಾತು ಉಳಿದಭಕ್ತರೆಲ್ಲರೂ ನಿನ್ನ ಸಮಾನ, ಜಂಗಮ ಲಿಂಗಗಳು ಎಂಬುದು ಅವರ ವಿನಯವನ್ನು, ನಿರಹಂಕಾರವನ್ನು ಎತ್ತಿಹಿಡಿಯುತ್ತದೆ.

ಒಮ್ಮೆ ಯಾರೋ ದಾಸವರೇಣ್ಯರನ್ನು, " ಯಾರು ಸ್ವರ್ಗಕ್ಕೆ ಹೋಗುತ್ತಾರೆ ? " ಎಂದು ಪ್ರಶ್ನಿಸಿದರಂತೆ. ಅದಕ್ಕೆ ಅವರು ನಾನು ಹೋದರೆ ಹೋಗಬಹುದು ಎಂದರು. ಅವರ ಮಾತಿನ ಮರ್ಮವನ್ನು ತಿಳಿಯದ ಕೆಲವರು ಅವರಿಗೆ ಬಹಳ ಗರ್ವವೆಂದುಕೊಂಡಿರಬೇಕು. ಆದರೆ ಅವರು ಹೇಳಿದ್ದು ಮನುಷ್ಯನಿಗೆ ನಾನು, ನನ್ನದು ಎಂಬ ಭಾವನೆ, ' ಅಹಂಕಾರ ' ಹೋದರೆ ಅವನು ಸ್ವರ್ಗಕ್ಕೆ ಹೋಗುವುದು ಸಾಧ್ಯ ಎಂದು. ಅಂದರೆ ಅಹಂಕಾರವನ್ನು ಬಿಟ್ಟು ವಿನಯಗುಣದಿಂದ ವಿಭೂಷಿತನಾದ ಮನುಷ್ಯ ದೇವರ ಕೃಪೆಗೆ ಪಾತ್ರನಾಗುತ್ತಾನೆ ಎಂದು ಸ್ಪಷ್ಟವಾಗುತ್ತದೆ.

# ಎಂ.ಪಿ.ಎಂ. ಕಾಗದ ಪೂರೈಕೆಗೆ ಬದ್ಧ ಮತ್ತು ಯಾವುದೇ ಸವಾಲನ್ನೆದುರಿಸಲು ಸಿದ್ಧ.

## ಎಂ.ಪಿ.ಎಂ.ನ 140 ಕೋಟಿ ರೂ.ಗಳ ವಿಸ್ತರಣೆಯ ಯೋಜನೆ ಈಗ ಮೂರ್ತರೂಪ ತಾಳುತ್ತಿದೆ.

ರಾಷ್ಟ್ರದ ಅತಿ ಹಳೆಯ ಕಾಗದ ತಯಾರಿಕೆಯ ಕೇಂದ್ರವಾದ ಎಂ.ಪಿ.ಎಂ. ಸದ್ಯದಲ್ಲಿಯೇ, ರಾಷ್ಟ್ರದಲ್ಲೆಲ್ಲಾ ಒಂದೇ ನೆಲೆಯಲ್ಲಿ ಬೆಳೆದಿರುವ, ಅತಿ ದೊಡ್ಡ ಘಟಕವಾಗಿ ಶೀಘ್ರ ರೀತಿಯಲ್ಲಿ ಪರಿವರ್ತಿತಗೊಳ್ಳುತ್ತಿದೆ. 140 ಕೋಟಿ ರೂ.ಗಳ ಮಹತ್ತರ ವಿಸ್ತರಣೆಯ ಯೋಜನೆಯು ಮುಕ್ತಾಯ ಘಟ್ಟದಲ್ಲಿದೆ.

ವೃತ್ತಪತ್ರಿಕೆಯ ಕಾಗದ ತಯಾರಿಕಾ ಸ್ಥಾವರದ ಜೋಡಣೆ ಹಾಗೂ ನಿರ್ಮಾಣ ಕಾರ್ಯ ಅತಿ ಬಿರುಸಿನ ಕಾರ್ಯಾಚರಣೆಯಲ್ಲಿರುವುದನ್ನು ಭದ್ರಾವತಿಯಲ್ಲಿ ಈಗ ಕಾಣಬಹುದಾಗಿದೆ. ಭಾರತದ ಮತ್ತು ಸಾಗರೋತ್ತರ ನಾಡುಗಳ ಅತ್ಯಂತ ಮೇಧಾವಿಗಳು, ಫಿನ್ಲೆಂಡ್ ದೇಶದ ತಾಂತ್ರಿಕ ಪರಿಣತಿ ಹಾಗೂ ವಿಶ್ವದ ಅಗ್ರಮಾನ್ಯ ರಾಷ್ಟ್ರಗಳಿಂದ ಪಡೆದ ಯಂತ್ರೋಪಕರಣಗಳ ನೆರವಿನಿಂದ ಇಲ್ಲಿ ಕಾರ್ಯನಿರತರಾಗಿರುತ್ತಾರೆ.

ನೂರಾರು ಜನ ಎಂ.ಪಿ.ಎಂ. ನೌಕರ ವರ್ಗದವರು ಈಗ ಅತ್ಯಾಧುನಿಕವಾಗಿ ಚಿಪ್ಪರ್ ವಿಭಾಗ, ಪಲ್ಪ್ ಮಿಲ್, ಕೋಲ್ ಹ್ಯಾಂಡ್ಲಿಂಗ್ ಯಂತ್ರಗಳು, ವಿದ್ಯುತ್ ವಿತರಣಾಗಾರಗಳು ಹಾಗೂ ಇನ್ನೂ ಅನೇಕ ಅತಿ ಸೂಕ್ಷ್ಮ ಮತ್ತು ತಾಂತ್ರಿಕ ನಾವೀನ್ಯತೆ ಒಳಗೊಂಡ ಯಂತ್ರಗಳ ನಿರ್ಮಾಣದ ಮುಕ್ತಾಯದ ಹಂತದಲ್ಲಿ ನಿರತರಾಗಿದ್ದಾರೆ. ಹಂತ ಹಂತವಾಗಿ 75,000 ಭೂಮಿಯಲ್ಲಿ ಕಾಡನ್ನು ಅಭಿವೃದ್ಧಿಪಡಿಸುವ ಮತ್ತೊಂದು ಸವಾಲನ್ನು ಸಹ ಎತ್ತಿಕೊಳ್ಳಲಾಗಿದೆ.

ಇಷ್ಟೆಲ್ಲಾ ಕಾರ್ಯ ವ್ಯಾಪ್ತಿಯು, ಎಂ.ಪಿ.ಎಂ.ನಿಂದ ಶೀಘ್ರವೇ ಹೊರಬರಲಿರುವ ವೃತ್ತ ಪತ್ರಿಕೆಯ, ಬರೆಯುವ, ಮುದ್ರಣದ ಮತ್ತು ಪ್ಯಾಕಿಂಗ್ ಕಾಗದಗಳ ಉತ್ಪಾದನೆಯ ಕಥೆಯನ್ನು ಯಥಾರ್ಥಗೊಳಿಸುವ ಸಲುವಾಗಿಯೇ ನಡೆದಿದೆ. ಇದರಿಂದ ರಾಷ್ಟ್ರದ ಸಂಪನ್ಮೂಲಗಳಿಗೆ ಪ್ರತಿ ವರ್ಷ 75 ಸಾವಿರ ಟನ್ ವೃತ್ತಪತ್ರಿಕೆಯ ಕಾಗದ ಮತ್ತು 37 ಸಾವಿರ ಟನ್‌ಗಳಷ್ಟು ಬೇರೆ ಬಗೆಯ ಕಾಗದಗಳು ಸೇರಲಿವೆ. ಈ ಮೂಲಕ ಕಾಗದದ ಬೇಡಿಕೆ ಹಾಗೂ ಪೂರೈಕೆಗಳ ನಡುವಿನ ಅಂತರವನ್ನು ಕಡಿಮೆ ಮಾಡಲು ಸಾಧ್ಯವಾಗುತ್ತದೆ.

## ಮುನ್ನಡೆಯ ಮಾಧ್ಯಮ - ಕಾಗದ



**ದಿ ಮೈಸೂರ್ ಪೇಪರ್ ಮಿಲ್ಸ್ ಲಿಮಿಟೆಡ್**

ರಿಜಿಸ್ಟರ್ಡ್ ಕಛೇರಿ : 16/4 ಆಲಿ ಅಸ್ಕರ್ ರೋಡ್ ಬೆಂಗಳೂರು-560 052

ಕ್ರೀಮ್ ವೋವ್, ಅಜುರ್ ಲೇಡ್ಸ್, ಡುಪ್ಲಿಕೇಟಿಂಗ್, ಬಾಂಡ್ಸ್, ಪ್ರಿಂಟಿಂಗ್ಸ್, ಕ್ರಾಫ್ಟ್ಸ್, ಮೆನಿಲ್ಲಾ, ಪಲ್ಪ್ ಬೋರ್ಡ್ಸ್ ಮತ್ತು ಈಗ—ವೃತ್ತಪತ್ರಿಕೆಯ ಕಾಗದ.

MPM-CAS-80116